**ZOO AUTHORITY OF KARNATAKA**
**OFFICE OF THE EXECUTIVE DIRECTOR, BANNERGHATTA BIOLOGICAL PARK, BANGALORE-83**
**BRIEF SHORT TERM RE-TENDER NOTIFICATION**
**No. A4/BFP/CR-15/2005-06, Dated: 20th June 2005**

It is hereby notified for the general information of the public that sealed tenders are invited and will be received by the Executive Director, Bannerghatta Biological Park, Bangalore-83 from the reputed and experienced Registered Electrical contractors of class IV and above from KPTCL/BESCOM/KPWD.

**SCHEDULE**

| Unit No. | Particulars of work | Approximate cost of the Tender (Rs.in lakhs) | EMD to be furnished (In Rs.) | Time for execution |
|---|---|---|---|---|
| 1 | Providing and errection of L.T (48 KW) capacity transformer with accessories at Butterfly Park of Bannerghatta Biological Park | 1.00 | 2,000 | 15 days |

**CONDITIONS:**

1. The tender forms with detailed tender conditions can be had from the office of the undersigned during the office working hours from 30.06.2005 to 01.07.2005 on payment of Rs.276.00 (including taxes).
2. Receipt of tender is up to 3.00 PM on 02.07.2005.
3. Opening of tender is on 02.07.2005 at 4.00 PM.
4. Further details can be had from the office of the undersigned.

Executive Director & Deputy Conservator of Forests,
Bannerghatta Biological Park, Bangalore-83.

PD-76

**ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯೋಲಾಜಿಕಲ್ ಪಾರ್ಕ್, ಬೆಂಗಳೂರು-83**
**ಹರಾಜು ಪ್ರಕಟಣೆ ಸಂಖ್ಯೆ: ಎ4/ಬ.ಬ.ಪಾ/ವಾಹನ/ಜಿ.ಎಲ್-1/2005-06, ದಿನಾಂಕ: 22ನೇ ಜೂನ್ 2005**

**ವಿಷಯ:** ಅನುಪಯುಕ್ತ ವಾಹನವನ್ನು ಹರಾಜು ಮಾಡುವ ಬಗ್ಗೆ.

ಸಮಸ್ತ ಸಾರ್ವಜನಿಕರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಕಛೇರಿಯಲ್ಲಿರುವ ಅನುಪಯುಕ್ತ ವಾಹನವನ್ನು ಈ ಕೆಳಗಿನ ತಪ್ಷೀಲು ರೀತ್ಯಾ ಸಾರ್ವಜನಿಕವಾಗಿ ಎಲ್ಲಿ ಹೇಗಿದೆಯೋ ಹಾಗೆಯೇ ಕಾರ್ಯನಿರ್ವಾಹಕ ನಿರ್ದೇಶಕರು, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು ಅಥವಾ ಇವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳಿಂದ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.

**ತಪ್ಷೀಲು**

| ಕ್ರಮ ಸಂಖ್ಯೆ | ವಾಹನದ ವಿವರ | ಹರಾಜಿನ ದಿನಾಂಕ ಮತ್ತು ಸಮಯ | ಹರಾಜು ಮಾಡುವ ಸ್ಥಳ |
|---|---|---|---|
| 1 | ಸಿ.ಕೆ.ಜಿ. 621 ಮಾರುತಿ ಜಿಪ್ಸಿ ವಾಹನ ಮಾಡಲ್ 1987 | ದಿನಾಂಕ: 23.07.2005 ರಂದು ಮಧ್ಯಾಹ್ನ 3 ಗಂಟೆಗೆ | ಬನ್ನೇರುಘಟ್ಟ ಬಯೋಲಾಜಿಕಲ್ ಪಾರ್ಕ್ ಆವರಣದಲ್ಲಿ |

**ಷರತ್ತುಗಳು:**

1. ಹರಾಜಿನಲ್ಲಿ ಭಾಗವಹಿಸುವವರು ರೂ.5000/- ಇ.ಎಂ.ಡಿ. ಯನ್ನು ಕಾರ್ಯನಿರ್ದೇಶಕರು, ಬನ್ನೇರುಘಟ್ಟ ಬಯೊಲಾಜಿಕಲ್ ಪಾರ್ಕ್, ಬೆಂಗಳೂರು, ಇವರ ಪದನಾಮಕ್ಕೆ ಡಿ.ಡಿ/ನಗದನ್ನು ಹರಾಜಿಗೆ ಮುನ್ನ ಸಲ್ಲಿಸಬೇಕು. ಸದರಿ ಇ.ಎಂ.ಡಿ. ಮೊತ್ತವನ್ನು ಹರಾಜಿನಲ್ಲಿ ಯಶಸ್ವಿ ಬಿಡ್ಡುದಾರರಾಗಿದ್ದಲ್ಲಿ ಬಿಡ್ ಮೊತ್ತಕ್ಕೆ ಸರಿಹೊಂದಿಸಿಕೊಳ್ಳಲಾಗುವುದು.
2. ಹರಾಜಿನಲ್ಲಿ ಯಶಸ್ವಿ ಬಿಡ್ಡುದಾರರಾಗದಿದ್ದಲ್ಲಿ ಸದರಿ ಇ.ಎಂ.ಡಿ. ಯನ್ನು ಹರಾಜಿನ ನಂತರ ಹಿಂತಿರುಗಿಸಲಾಗುವುದು.
3. ಹರಾಜಿನಲ್ಲಿ ಭಾಗವಹಿಸಲು ಇಚ್ಛಿಯುಳ್ಳವರು ಹರಾಜಿಗೆ ಮುನ್ನ ತಪ್ಷೀಲಿನಲ್ಲಿ ನಮೂದಿಸಿದ ಸ್ಥಳದಲ್ಲಿನ ವಾಹನವನ್ನು ಕೆಲಸದ ದಿನಾಂಕಗಳಂದು ಪರಿಶೀಲಿಸಿ ವಾಹನದ ಸ್ಥಿತಿಯ ಬಗ್ಗೆ ಖಾತ್ರಿ ಪಡಿಸಿಕೊಳ್ಳಬಹುದಾಗಿದೆ. ಹರಾಜಿನ ನಂತರ ಯಾವುದೇ ದೂರುಗಳನ್ನು ಪರಿಗಣಿಸಲಾಗುವುದಿಲ್ಲ.
4. ಯಶಸ್ವಿಯಾದ ಬಿಡ್ಡುದಾರನು ಹರಾಜು ಮುಗಿದ ತಕ್ಷಣ ಹರಾಜಿನ ಮೊತ್ತದ 1/2 ಭಾಗ ಮತ್ತು ಚಾಲ್ತಿಯಲ್ಲಿರುವ ಎಲ್ಲಾ ತೆರಿಗೆಗಳ ಸಹಿತ ಹಣವನ್ನು ಪಾವತಿಸಿ ರಶೀದಿಯನ್ನು ಪಡೆದುಕೊಳ್ಳತಕ್ಕದ್ದು ತಪ್ಪಿದ್ದಲ್ಲಿ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮೂಲ ಬಿಡ್ಡುದಾರರ ಜವಾಬ್ದಾರಿಯ ಮೇಲೆ ಮರು ಹರಾಜು ನಡೆಸಲಾಗುವುದು ಮತ್ತು ತತ್ಸಂಬಂಧ ಆಗುವ ಹಾನಿಗೆ ಮೂಲ ಬಿಡ್ಡುದಾರರೇ ಜವಾಬ್ದಾರರಾಗಿರುತ್ತಾರೆ.
5. ಹರಾಜಿನ ಸ್ಥಿರೀಕರಣವನ್ನು ಯಶಸ್ವಿ ಬಿಡ್ಡುದಾರನಿಗೆ ನೋಂದಣಿ ಅಂಚೆ ಮೂಲಕ ತಿಳಿಸಲಾಗುವುದು. ಯಶಸ್ವಿ ಬಿಡ್ಡುದಾರರು ಉಳಿದ ಶೇ.50 ರಷ್ಟು ಮೊತ್ತವನ್ನು 10 ದಿನದೊಳಗೆ ಪಾವತಿಸಿ ಸ್ವೀಕೃತಿ ಪಡೆದು ವಾಹನವನ್ನು ವಶಕ್ಕೆ ತೆಗೆದುಕೊಳ್ಳುವುದು.
6. ಹರಾಜನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಕಾರ್ಯನಿರ್ದೇಶಕರಿಗೆ ಇರುತ್ತದೆ. ಯಾವುದೇ ಕಾರಣವನ್ನು ನೀಡದೆ ಸದರಿ ಅಧಿಕಾರಿಗಳು ಹರಾಜನ್ನು ತಿರಸ್ಕರಿಸಬಹುದಾಗಿರುತ್ತದೆ.
7. ವಾಹನದ ನೋಂದಾವಣೆ ವರ್ಗಾವಣೆ ಯಶಸ್ವಿ ಬಿಡ್ಡುದಾರರ ಜವಾಬ್ದಾರಿಯಾಗಿರುತ್ತದೆ. ಆದಾಗ್ಯೂ ಈ ವಿಚಾರದಲ್ಲಿ ಅವಶ್ಯವಿರುವ ಸಹಕಾರವನ್ನು ಪ್ರಾಧಿಕಾರ ನೀಡಲಾಗುವುದು.

8. ಹರಾಜು ನಿಗದಿಪಡಿಸಿದ ದಿನಾಂಕದಂದು ಸಾರ್ವತ್ರಿಕ ರಜೆಯಾದ ಪಕ್ಷದಲ್ಲಿ ಸದರಿ ಹರಾಜಿನ ದಿನವನ್ನು ಮುಂದಿನ ಕಛೇರಿಯ ಕೆಲಸದ ದಿನದಂದು ಅದೇ ಸಮಯ ಮತ್ತು ಅದೇ ಸ್ಥಳದಲ್ಲಿ ನಡೆಸಲಾಗುವುದು.

ಕಾರ್ಯನಿರ್ವಾಹಕ ನಿರ್ದೇಶಕರು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಪಿ.ಡಿ. 75 ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು-83.

**FORM - 1**
**(See Rule 9)**
**DEPARTMENT OF POLICE**
**Office of the Director General & Inspector General of Police, Karnataka State, Nrupathunga Road, Bangalore-1**
**NOTIFICATION Dated: 7th June 2005**

**Sri C. HANUMANTHA** Working as Section Superintendent, Office of the Superintendent of Police, Chamarajanagar District is permitted to Change his/her Name to **SRI C. HANUMANTHAIAH, S/O H. CHELUVAIAH**

**S. RAMAKRISHNA**
PD. 69 Deputy Inspector General of Police, Head Quarters-1,
Signature & Designation of the Appointing Authority.

**ಕಮಾಂಡೆಂಟ್ ರವರ ಕಛೇರಿ, ಕರ್ನಾಟಕ ರಾಜ್ಯ ಮೀಸಲು ಪೊಲೀಸ್, 8ನೇ ಪಡೆ, ಶಿವಮೊಗ್ಗ**
**ಟೆಂಡರ್ ಕಂ ಬಹಿರಂಗ ಹರಾಜು**
**ಸಂಖ್ಯೆ: 48/ವಾವಿ/2005-06, ದಿನಾಂಕ: 17ನೇ ಜೂನ್ 2005**

**ವಿಷಯ:** ಈ ಘಟಕದ ವಾಹನ ಸಾರಿಗೆ ವಿಭಾಗದ ದಾಸ್ತಾನಿನಲ್ಲಿರುವ ಬಿಡಿ ಭಾಗಗಳನ್ನು ಬಹಿರಂಗ ಹರಾಜು ಮಾಡುವ ಬಗ್ಗೆ.
**ಉಲ್ಲೇಖ:** ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು ರವರ ಜ್ಞಾಪನ ಸಂಖ್ಯೆ: ವಾ.ಸಾ.ವಿ/27/2005-06, ದಿನಾಂಕ: 08.06.2005.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಗೆ ಹೆಸರಿಸಿರುವ ಅನುಪಯುಕ್ತಗೊಂಡ ವಿವಿಧ ರೀತಿಯ ವಾಹನದ ಬಿಡಿಭಾಗಗಳು ಹಾಗೂ ಸುಟ್ಟ ಆಯಿಲ್‌ನ್ನು ಕರ್ನಾಟಕ ರಾಜ್ಯ ಮೀಸಲು ಪೊಲೀಸ್, 8ನೇ ಪಡೆ, ಮಾಚೇನಹಳ್ಳಿ, ಶಿವಮೊಗ್ಗ ಘಟಕದ ವಾಹನ ಸಾರಿಗೆ ವಿಭಾಗದ ಆವರಣದಲ್ಲಿ ದಿನಾಂಕ: 20.07.2005 ರಂದು ಬೆಳಿಗ್ಗೆ 10.00 ಗಂಟೆಗೆ ಬಹಿರಂಗ ಹರಾಜು ಮಾಡಲಾಗುವುದು.

**ಬಿಡಿಭಾಗಗಳ ವಿವರ**

| | | |
|---|---|---|
| 1 | ವಿವಿಧ ಅಳತೆಯ ಟೈರುಗಳು | 40 |
| 2 | ವಿವಿಧ ಅಳತೆಯ ಟ್ಯೂಬುಗಳು | 40 |
| 3 | ವಿವಿಧ ಅಳತೆಯ ಫ್ಲಾಪ್‌ಗಳು | 24 |
| 4 | ವಿವಿಧ ರೀತಿಯ ಬಿಡಿಭಾಗಗಳು | 147 |
| 5 | ಸುಟ್ಟ ಇಂಜಿನ್ ಆಯಿಲ್ | 200 ಲೀಟರ್ |

ಮೇಲೆ ನಮೂದಿಸಿರುವ ಅನುಪಯುಕ್ತ ವಸ್ತುಗಳನ್ನು ಈ ಕೆಳಗಿನ ಷರತ್ತುಗಳೊಂದಿಗೆ ಬಹಿರಂಗ ಹರಾಜು ಮಾಡಲಾಗುವುದು.

**ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1. ಮೊಹರು ಮಾಡಿದ ಟೆಂಡರನ್ನು ಕಮಾಂಡೆಂಟ್, 8ನೇ ಪಡೆ, ಕೆ.ಎಸ್.ಆರ್.ಪಿ. ಶಿವಮೊಗ್ಗ ಇವರಿಗೆ ಅನುಪಯುಕ್ತ ವಸ್ತುಗಳ ಖರೀದಿಗಾಗಿ ಟೆಂಡರ್ ಎಂದು ಲಕೋಟೆಯ ಮೇಲೆ ಬರೆದು ಕಳಿಸುವುದು.
2. ಅತೀ ಹೆಚ್ಚಿನ ಬೆಲೆಯನ್ನು ಅಂಕಿ ಮತ್ತು ಅಕ್ಷರಗಳಲ್ಲಿ ಬರೆಯತಕ್ಕದ್ದು.
3. ಹರಾಜಿನಲ್ಲಿ ಭಾಗವಹಿಸುವವರು ರೂ.2,000-00 (ರೂ. ಎರಡು ಸಾವಿರ ಮಾತ್ರ) ಗಳನ್ನು ಹರಾಜಿಗೆ ಮೊದಲೇ ಠೇವಣಿಯಾಗಿ ಕಮಾಂಡೆಂಟ್‌ರು, 8ನೇ ಪಡೆ, ಕೆ.ಎಸ್.ಆರ್.ಪಿ. ಶಿವಮೊಗ್ಗ ರವರಲ್ಲಿ ಠೇವಣಿ ಇಡತಕ್ಕದ್ದು.
4. ಪ್ರತಿ ವಸ್ತುಗಳ ಗುಣವನ್ನು ಅತೀ ಹೆಚ್ಚಿನ ಮೌಲ್ಯಕ್ಕೆ ಸೂಚಿಸಿದ ಠೇವಣಿದಾರರಿಗೆ ಬಿಡಲಾಗುವುದು.
5. ಬಿಡ್ ಮೊಬಲಗನ್ನು ವಸ್ತುಗಳನ್ನು ಖರೀದಿಸಿದ ದಿನವೇ ಪೂರ್ಣವಾಗಿ ನಗದಾಗಿ ಪಾವತಿಸತಕ್ಕದ್ದು. (ಚೆಕ್ ಸ್ವೀಕರಿಸುವುದಿಲ್ಲ) ತಪ್ಪಿದಲ್ಲಿ ಖರೀದಿಸಿದ ವಸ್ತುಗಳನ್ನು ಮರು ಹರಾಜು ಮಾಡಲಾಗುವುದು. ಮರು ಹರಾಜಿನ ಮೌಲ್ಯ ಕಡಿಮೆಯಾದಲ್ಲಿ ತಪ್ಪಿತಸ್ಥರಾದ ಮೊದಲ ಖರೀದಿದಾರರಾದ ನೀವೇ ಭರಿಸತಕ್ಕದ್ದು.
6. ಹರಾಜು ಮಾಡುವ ಅಧಿಕಾರಿಯು ಯಾವುದೇ ಕಾರಣವಿಲ್ಲದೆ ಬಿಡ್ಡನ್ನು ಮುನ್ಸೂಚನೆ ಇಲ್ಲದೆ ಹಸ್ತಾಂತರ ಮಾಡಲು ಒಪ್ಪುವ/ತಿರಸ್ಕರಿಸುವ ಅಧಿಕಾರವನ್ನು ಪಡೆದಿರುತ್ತಾರೆ.
7. ವಸ್ತುಗಳನ್ನು ಖರೀದಿಸಿದ ಮೌಲ್ಯದ ಮೊತ್ತವನ್ನು ಹಾಗೂ ಕರ್ನಾಟಕ ರಾಜ್ಯ ಮಾರಾಟ ತೆರಿಗೆಯನ್ನು ಬಿಡ್ ಹಣದ ಜೊತೆಯಲ್ಲಿಯೇ ವಸೂಲಿ ಮಾಡಲಾಗುವುದು.
8. ವಸ್ತುಗಳನ್ನು ಖರೀದಿ ಮಾಡಿದವರೇ ಅದೇ ದಿನ ಹರಾಜು ಸ್ಥಳದಿಂದ ಸಾಗಿಸುವ ವ್ಯವಸ್ಥೆಯನ್ನು ಮಾಡಿಕೊಳ್ಳತಕ್ಕದ್ದು.
9. ಠೇವಣಿಯಾಗಿಟ್ಟ ರೂ.2,000-00 ಗಳನ್ನು ಯಶಸ್ವಿಯಾಗದ ಠೇವಣಿದಾರರಿಗೆ ಬಿಡ್ ಮುಗಿದ ನಂತರ ಅದೇ ದಿನ ಹಿಂದಿರುಗಿಸಲಾಗುವುದು.
10. ಸರ್ಕಾರದ ವಸ್ತುಗಳ ಹರಾಜಿನಲ್ಲಿ ಭಾಗೀದಾರರಾಗುವ ಎಲ್ಲರೂ ಸರ್ಕಾರಿ ನಿಯಮಗಳಿಗೆ ಬದ್ಧರಾಗಿರತಕ್ಕದ್ದು.

ಕಮಾಂಡೆಂಟ್,
ಪಿ.ಆರ್. 354 ಕರ್ನಾಟಕ ರಾಜ್ಯ ಮೀಸಲು ಪೊಲೀಸ್, 8ನೇ ಪಡೆ, ಶಿವಮೊಗ್ಗ.

## ತೋಟಗಾರಿಕೆ ಉಪ ನಿರ್ದೇಶಕರವರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು-1

## ಟೆಂಡರ್ ಪ್ರಕಟಣೆ

**ಸಂಖ್ಯೆ: ತೋಉನಿ:ಕಉ:ವಿನಿ2:12:2005-06, ದಿನಾಂಕ: 20ನೇ ಜೂನ್ 2005**

ಕಬ್ಬನ್ ಉದ್ಯಾನವನದೊಳಗೆ ಇರುವ ಸಾರ್ವಜನಿಕ ಶೌಚಾಲಯದ ವಾರ್ಷಿಕ ಗುತ್ತಿಗೆ ಆಧಾರದ ಮೇಲೆ ಸ್ವಚ್ಛತಾ ಕೆಲಸಗಳನ್ನು ಮಾಡಿಸಲು ಆದೇಶ ನೀಡಿದ ದಿನಾಂಕದಿಂದ ಒಂದು ವರ್ಷದ ಅವಧಿಗಾಗಿ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಈ ಕೆಳಗೆ ಸೂಚಿಸಿರುವ ಷರತ್ತು ಹಾಗೂ ನಿಬಂಧನೆಗಳಿಗೆ ಒಪ್ಪಿದಲ್ಲಿ ದಿನಾಂಕ: 18.7.2005 ರಿಂದ 21.7.2005 ರವರೆಗೆ ಈ ಕಛೇರಿಯಿಂದ ರೂ.500-00 ದರದಲ್ಲಿ ಮಾರಾಟ ಮಾಡುವ ನಿಗದಿತ ಟೆಂಡರ್ ಫಾರಂಗಳನ್ನು ಪಡೆದು ಮೊಹರು ಮಾಡಿದ ಟೆಂಡರ್‌ಗಳನ್ನು ದಿನಾಂಕ: 22.7.2005 ರಂದು ಸಂಜೆ 4.00 ಗಂಟೆಯೊಳಗೆ ಈ ಕಛೇರಿಗೆ ಸಲ್ಲಿಸುವುದು. ಟೆಂಡರ್‌ಗಳನ್ನು ಅದೇ ದಿನ ಸಂಜೆ 5.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು.

**ನಿರ್ವಹಿಸಬೇಕಾದ ಗುತ್ತಿಗೆ ಕೆಲಸಗಳು:**

1. ಕಬ್ಬನ್ ಉದ್ಯಾನವನ ಬ್ಯಾಂಡ್‌ಸ್ಟ್ಯಾಂಡ್ ಬಳಿ ಒಂದು ಸಾರ್ವಜನಿಕ ಶೌಚಾಲಯವಿದ್ದು, ಅದರಲ್ಲಿ ಒಟ್ಟು 18 ಶೌಚಾಲಯಗಳಿರುತ್ತವೆ. ಉದ್ಯಾನಕ್ಕೆ ಬರುವ ಪ್ರವಾಸಿಗರು, ಸಾರ್ವಜನಿಕರವರಿಂದ ಮೂತ್ರ ವಿಸರ್ಜನೆಗೆ ರೂ.1.00 ಹಾಗೂ ಮಲ ವಿಸರ್ಜನೆಗೆ ರೂ.2.00 ಗಳನ್ನು ಪಡೆದು ಸ್ವಚ್ಛಗೊಳಿಸಬೇಕಾಗಿರುತ್ತದೆ. ಹಾಗೂ ಶೌಚಾಲಯದಲ್ಲಿ ಒಂದು ವಹಿಯನ್ನು ಇಟ್ಟು ಆ ಕಛೇರಿಯ ಒಬ್ಬ ನೌಕರನ ಸಮ್ಮುಖದಲ್ಲಿ ದಾಖಲು ಮಾಡಬೇಕು.
2. ಸದರಿ ಶೌಚಾಲಯವನ್ನು ಪ್ರತಿ ದಿನ ಕನಿಷ್ಠ 3 ಬಾರಿ ಬ್ಲೀಚಿಂಗ್ ಪೌಡರ್ ಮತ್ತು ಫೆನಾಯಿಲ್ ಬಳಸಿ ಸ್ವಚ್ಛಗೊಳಿಸಬೇಕು.
3. ಗುತ್ತಿಗೆದಾರರು ತಮ್ಮ ಸ್ವಂತ ಖರ್ಚಿನಿಂದ ಮೇಲೆ ಸೂಚಿಸಿದ ಒಂದು ಮತ್ತು ಎರಡು ವಿಭಾಗಗಳ ಶೌಚಾಲಯಗಳನ್ನು ಸ್ವಚ್ಛಗೊಳಿಸಲು ಬ್ಲೀಚಿಂಗ್ ಪೌಡರ್ ಮತ್ತು ಫೆನಾಯಿಲ್ ಹಾಗೂ ಇತರೆ ಸಲಕರಣೆಗಳನ್ನು ತಮ್ಮ ಸ್ವಂತ ಖರ್ಚಿನಿಂದ ನಿರ್ವಹಿಸಬೇಕಾಗಿರುತ್ತದೆ. ಸದರಿ ಶೌಚಾಲಯದ ಸ್ವಚ್ಛತೆಗೆ ಒಂದು ವರ್ಷಕ್ಕೆ ಎಷ್ಟು ಹಣವನ್ನು ಸಂದಾಯ ಮಾಡಲಾಗುತ್ತದೆ ಎಂಬುದನ್ನು ನಿಗದಿತ ಟೆಂಡರ್ ನಮೂನೆಯಲ್ಲಿ ನಮೂದಿಸಬೆಕು.
4. ಬೇಸಿಗೆ ರಜಾ ಹಾಗೂ ಇತರೆ ಸಾರ್ವಜನಿಕ ರಜಾ ದಿನಗಳಲ್ಲಿ ಹೆಚ್ಚಿನ ಸಿಬ್ಬಂದಿಯನ್ನು ನಿಯೋಜಿಸಿ ಸ್ವಚ್ಛತಾ ಕೆಲಸಗಳನ್ನು ಸಾರ್ವಜನಿಕರಿಂದ ಯಾವುದೇ ದೂರುಗಳು ಬರದಂತೆ ಹಾಗೂ ಶೌಚಾಲಯ ಕಟ್ಟಡಕ್ಕೆ ಯಾವುದೇ ಹಾನಿಯಾಗದಂತೆ ನೋಡಿಕೊಳ್ಳಬೇಕು.
5. ಹೆಚ್ಚಿನ ವಿಷಯಗಳಿಗೆ ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ ಇವರ ಕಛೇರಿಯಲ್ಲಿ ಸಂಬಂಧಪಟ್ಟವರನ್ನು ಸಂಪರ್ಕಿಸಲು ತಿಳಿಸಿದೆ.

### ಷರತ್ತು ಮತ್ತು ನಿಬಂಧನೆಗಳು

1. ಟೆಂಡರ್ ಸಲ್ಲಿಸುವ ಸಮಯದಲ್ಲಿ ರೂ.5000-00 ಗಳ ಮೌಲ್ಯದ ಇ.ಎಂ.ಡಿ. ಬ್ಯಾಂಕ್ ಡ್ರಾಫ್ಟ್‌ನ್ನು ಬೆಂಗಳೂರು ಗಾರ್ಡನ್ ಟ್ರಸ್ಟ್, ಲಾಲ್‌ಬಾಗ್, ಬೆಂಗಳೂರು ರವರ ಹೆಸರಿಗೆ ತೆಗೆದು ಟೆಂಡರ್ ಫಾರಂ ಜೊತೆಯಲ್ಲಿ ಲಗತ್ತಿಸಬೇಕು. ಯಶಸ್ವಿ ಟೆಂಡರ್‌ದಾರರ ಠೇವಣಿಯನ್ನು ಬಿಟ್ಟು ಉಳಿದ ಟೆಂಡರ್‌ದಾರರ ಇ.ಎಂ.ಡಿ. ಯನ್ನು ಟೆಂಡರ್ ಪರಿಶೀಲನೆ ನಂತರ ಕೆ.ಟಿ.ಪಿ.ಎ. ಆಕ್ಟ್ ಅನ್ವಯ ಹಿಂತಿರುಗಿಸಲಾಗುವುದು ಅನುಮೋದಿತ ಟೆಂಡರ್‌ದಾರರ ಠೇವಣಿಯನ್ನು ಗುತ್ತಿಗೆ ಅವಧಿಯನ್ನು ಯಶಸ್ವಿಯಾಗಿ ಪೂರೈಸಿದ ನಂತರ ಬಡ್ಡಿ ರಹಿತವಾಗಿ ಹಿಂತಿರುಗಿಸಲಾಗುವುದು.
2. ಒಂದು ಬಾರಿ ಗುತ್ತಿಗೆ ಟೆಂಡರ್ ದರವನ್ನು ನಮೂದಿಸಿದ ನಂತರ ಯಾವುದೇ ಕಾರಣಕ್ಕೂ ಕಡಿಮೆ ಮಾಡುವುದಾಗಲಿ ಅಥವಾ ಹಿಂದಕ್ಕೆ ಪಡೆಯುವುದಕ್ಕೆ ಅವಕಾಶವಿರುವುದಿಲ್ಲ. ಹಾಗೇನಾದರು ಟೆಂಡರ್ ಹಿಂದಕ್ಕೆ ಪಡೆದಲ್ಲಿ ಅಥವಾ ಗುತ್ತಿಗೆ ಕೆಲಸಗಳನ್ನು ನಿರ್ವಹಿಸಲು ನಿರಾಕರಿಸಿದಲ್ಲಿ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಿಯಮಾನುಸಾರ ಕ್ರಮ ಜರುಗಿಸಲಾಗುವುದು.
3. ಟೆಂಡರ್ ಸಲ್ಲಿಸುವ ಸಮಯದಲ್ಲಿ ನಮೂದಿಸಿರುವ ಟೆಂಡರ್ ಮೊತ್ತದ ಶೇಕಡಾ 25 ಭಾಗದ ಹಣವನ್ನು ಬ್ಯಾಂಕ್ ಡ್ರಾಫ್ಟ್ ಮೂಲಕ ಟೆಂಡರ್ ನಮೂನೆಯೊಂದಿಗೆ ಲಗತ್ತಿಸಿರಬೇಕು ಈ ಹಣಕ್ಕೆ ಡ್ರಾಫ್ಟ್ ಲಗತ್ತಿಸದೆ ಇರುವ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು. ಅತೀ ಹೆಚ್ಚು ಮೊತ್ತ ನಮೂದಿಸಿರುವ ಟೆಂಡರ್‌ನ್ನು ನಿರ್ದೇಶಕರಿಂದ ಅನುಮೋದಿಸಿ ಉಳಿದ ಶೇಕಡ 75 ಭಾಗದ ಹಣವನ್ನು ಸಂದಾಯ ಮಾಡಲು ಸೂಚಿಸಿದ 7 ದಿನಗಳ ಒಳಗೆ ಈ ಕಛೇರಿಗೆ ಪಾವತಿ ಮಾಡಬೇಕು. ತಪ್ಪಿದಲ್ಲಿ ಠೇವಣಿ ಮೊತ್ತ ಹಾಗೂ ಟೆಂಡರ್ ಮೊತ್ತದ ಶೇಕಡ 25 ಭಾಗದ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮರು ಟೆಂಡರ್ ಪ್ರಕ್ರಿಯೆ ನಡೆಸಲಾಗುವುದು.
4. ಯಶಸ್ವಿ ಟೆಂಡರ್‌ದಾರರು ಶೌಚಾಲಯ ನಿರ್ವಹಣೆ ಕೆಲಸಗಳನ್ನು ಸಮರ್ಪಕವಾಗಿ ನಿರ್ವಹಿಸುವಲ್ಲಿ ವಿಫಲರಾದಲ್ಲಿ ಅಥವಾ ಸಾರ್ವಜನಿಕರಿಂದ ದೂರುಗಳು ಬಂದಲ್ಲಿ ಮಧ್ಯದಲ್ಲಿಯೇ ಟೆಂಡರ್ ಅವಧಿಯನ್ನು ರದ್ದುಪಡಿಸಿ ಸರ್ಕಾರಕ್ಕೆ ಸಂದಾಯ ಮಾಡಿರುವ ಠೇವಣಿ ಮತ್ತು ಟೆಂಡರ್ ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮುಂದಿನ ಕ್ರಮ ಜರುಗಿಸಲಾಗುವುದು.
5. ಮೇಲೆ ಸೂಚಿಸಿರುವ ಷರತ್ತು, ನಿಬಂಧನೆಗಳು ಹಾಗೂ ನಿರ್ವಹಿಸಬೇಕಾದ ಕೆಲಸಗಳಲ್ಲದೆ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರು ವಿಧಿಸಬಹುದಾದ ಮತ್ತು ವಹಿಸಬಹುದಾದ ಷರತ್ತು, ನಿಬಂಧನೆ ಹಾಗೂ ಸ್ವಚ್ಛತೆಗೆ ಸಂಬಂಧಿಸಿದ ಕೆಲಸಗಳನ್ನು ನಿರ್ವಹಿಸಲು ಬದ್ಧರಾಗಿರಬೇಕು.
6. ಟೆಂಡರ್‌ಗಳನ್ನು ಒಪ್ಪುವ ಅಥವಾ ಕಾರಣ ನೀಡದೆ ತಿರಸ್ಕರಿಸುವ ಹಕ್ಕು ತೋಟಗಾರಿಕೆ ನಿರ್ದೇಶಕರವರಲ್ಲಿ ಕಾಯ್ದಿರಿಸಲಾಗಿದೆ ಹಾಗೂ ಗುತ್ತಿಗೆ ಅವಧಿಯಲ್ಲಿ ಯಾವುದೇ ಲೋಪದೋಷಗಳು ಉದ್ಭವಿಸಿದಲ್ಲಿ ಟೆಂಡರ್ ಅವಧಿ ಮಧ್ಯದಲ್ಲಿಯೇ ರದ್ದುಪಡಿಸುವ ಹಕ್ಕನ್ನು ಸಹ, ತೋಟಗಾರಿಕೆ ನಿರ್ದೇಶಕರು ಹೊಂದಿರುತ್ತಾರೆ.
7. ಯಶಸ್ವಿ ಟೆಂಡರ್‌ದಾರರು ಗುತ್ತಿಗೆ ಕೆಲಸವನ್ನು ವಹಿಸಿಕೊಳ್ಳುವ ಮೊದಲು ಮೇಲೆ ಸೂಚಿಸಿರುವ ಎಲ್ಲಾ ಷರತ್ತು ನಿಬಂಧನೆಗಳು ಹಾಗೂ ನಿರ್ವಹಿಸಬಹುದಾದ ಕೆಲಸಗಳನ್ನು ನಿರ್ವಹಿಸುವ ಹಾಗೂ ಪಾಲಿಸುವ ಕುರಿತು ರೂ.100/- ಛಾಪಾ ಕಾಗದದ ಮೇಲೆ ಮುಚ್ಚಳಿಕೆ ಪತ್ರವನ್ನು ಬರೆದು ನೋಟರಿ ರವರಿಂದ ದೃಢೀಕರಿಸಿ ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು ರವರಿಗೆ ನೀಡಬೇಕು.

ತೋಟಗಾರಿಕೆ ಉಪ ನಿರ್ದೇಶಕರು,
ಕಬ್ಬನ್ ಉದ್ಯಾನವನ, ಬೆಂಗಳೂರು-1.

ಪಿ.ಆರ್. 364

## ತೋಟಗಾರಿಕೆ ಉಪ ನಿರ್ದೇಶಕರವರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು-1

**ಟೆಂಡರ್ ಪ್ರಕಟಣೆ ಸಂಖ್ಯೆ: ತೋಉನಿ:ಕಉ:ವಿನಿ2:1:2005-06, ದಿನಾಂಕ: 20ನೇ ಜೂನ್ 2005**

ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು ರವರ ಕಛೇರಿ, ಅಧೀನದ ಕಬ್ಬನ್ ಉದ್ಯಾನವನ, ಬಾಲಭವನಕ್ಕೆ ಹಾಗೂ ಚಾಮರಾಜ ಪ್ರತಿಮೆಯ ಬಳಿ ಬರುವ ಸಾರ್ವಜನಿಕರ ವಾಹನಗಳಾದ ಸೈಕಲ್, ಸ್ಕೂಟರ್, ಮೋಟಾರ್ ಬೈಕ್, ಮತ್ತು ನಾಲ್ಕು ಚಕ್ರ ವಾಹನಗಳಾದ ಕಾರು, ಜೀಪು, ಮೆಟಡಾರ್, ಮ್ಯಾಕ್ಸಿಕ್ಯಾಬ್ ವ್ಯಾನ್ ಮುಂತಾದ ಲಘು ವಾಹನಗಳ (ಸರ್ಕಾರಿ ವಾಹನಗಳು - ಲಾರಿ ಹೊರತುಪಡಿಸಿ) ನಿಲ್ದಾಣ ಶುಲ್ಕವನ್ನು (ಪಾರ್ಕಿಂಗ್ ಫೀ) ವಸೂಲಾತಿ ಮಾಡುವ ಬಗ್ಗೆ ದಿನಾಂಕ: 1.8.2005 ರಿಂದ 31.7.2006ರ ತನಕ ಒಂದು ವರ್ಷದ ಅವಧಿಗೆ ಟೆಂಡರ್ ಕರೆಯಲಾಗಿದೆ. ಆಸಕ್ತಿವುಳ್ಳ ಗುತ್ತಿಗೆದಾರರು ಈ ಮುಂದೆ ಸೂಚಿಸಿರುವ ಷರತ್ತು ಮತ್ತು ನಿಬಂಧನೆಗಳಿಗೆ ಒಪ್ಪಿದ್ದಲ್ಲಿ ಟೆಂಡರ್‌ನಲ್ಲಿ ಭಾಗವಹಿಸುವುದು.

**ವಿವರಗಳು:**

| | | |
|---|---|---|
| 1. | ನಿಗದಿತ ಟೆಂಡರ್ ಫಾರಂ ಮೌಲ್ಯ | ರೂ. 500-00 |
| 2. | ಟೆಂಡರ್ ಫಾರಂನ್ನು ಈ ಕಛೇರಿಯಿಂದ ಪಡೆಯುವ ಅವಧಿ | ದಿನಾಂಕ: 12.7.2005 ರಿಂದ 15.7.2005 ರವರೆಗೆ |
| 3. | ಭರ್ತಿ ಮಾಡಿದ ಟೆಂಡರ್ ಫಾರಂನ್ನು ಸ್ವೀಕರಿಸಲು ಕೊನೆಯ ದಿನಾಂಕ | ದಿನಾಂಕ: 16.7.2005 ರಂದು ಸಂಜೆ 4.00 ಗಂಟೆಯವರೆಗೆ |
| 4. | ಮೊಹರಾದ ಟೆಂಡರ್‌ಗಳನ್ನು ತೆರೆಯುವ ದಿನಾಂಕ: (ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ) | ದಿನಾಂಕ: 16.7.2005 ಸಂಜೆ 5.00 ಗಂಟೆಗೆ |
| 5. | ಟೆಂಡರ್ ಸಲ್ಲಿಸುವ ಭದ್ರತಾ ಠೇವಣಿ | ರೂ.25,000-00 |

ನಿಗದಿತ ಅವಧಿ ಮೀರಿದ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.

ತೋಟಗಾರಿಕೆ ಉಪ ನಿರ್ದೇಶಕರು,
ಕಬ್ಬನ್ ಉದ್ಯಾನವನ, ಬೆಂಗಳೂರು-1.

### ನಿಬಂಧನೆ ಮತ್ತು ಷರತ್ತುಗಳು

1. ಮೊಹರಾದ ಟೆಂಡರ್‌ನ್ನು ಸಲ್ಲಿಸುವಾಗ ರೂ.25000-00 (ರೂ. ಇಪ್ಪತ್ತೈದು ಸಾವಿರ ಮಾತ್ರ) ಗಳ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರಿಗೆ ಪಾವತಿಸುವಂತೆ ಪಡೆದು ಸಲ್ಲಿಸಬೇಕು. ಇಲ್ಲದಿದ್ದಲ್ಲಿ ಅಂತಹ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
2. ದಿನಾಂಕ: 1.8.2005 ರಿಂದ ಒಂದು ವರ್ಷದ ಅವಧಿಗೆ ವಾಹನ ನಿಲುಗಡೆ ಶುಲ್ಕ ವಸೂಲಾತಿ ಅವಧಿಯನ್ನು ಯಾವುದೇ ಕಾರಣಕ್ಕೆ ಮುಂದುವರಿಸುವಂತಿಲ್ಲ.
3. ಯಶಸ್ವಿ ಟೆಂಡರ್‌ದಾರರನ್ನು 1 ಮತ್ತು 2ನೇ ಹೆಚ್ಚಿನ ಟೆಂಡರ್‌ದಾರರನ್ನು ಹೊರತುಪಡಿಸಿ ಉಳಿದ ಟೆಂಡರ್‌ದಾರರ ಠೇವಣಿ ಹಣವನ್ನು ಮುಕ್ತಾಯದ ನಂತರ ಹಿಂತಿರುಗಿಸಲಾಗುವುದು. ಯಶಸ್ವಿ ಟೆಂಡರ್‌ದಾರರ ಭದ್ರತಾ ಠೇವಣಿ ಹಣವನ್ನು ಟೆಂಡರ್ ಅವಧಿಯನ್ನು ಸಮರ್ಪಕವಾಗಿ ಮತ್ತು ತೃಪ್ತಿಕರವಾಗಿ ಪೂರೈಸಿದ ನಂತರ ಹಿಂದಿರುಗಿಸಲಾಗುವುದು. ಈ ಠೇವಣಿ ಹಣಕ್ಕೆ ಯಾವುದೇ ಬಡ್ಡಿ ಹಣವನ್ನು ಕೊಡಲಾಗುವುದಿಲ್ಲ. ಎರಡನೇ ಅತಿ ಹೆಚ್ಚಿನ ಟೆಂಡರ್‌ದಾರರ ಠೇವಣಿ ಹಣವನ್ನು ಟೆಂಡರ್ ಅನುಮೋದನೆಯ ನಂತರ ಹಿಂದಿರುಗಿಸಲಾಗುವುದು.
4. ಟೆಂಡರ್‌ಗಳನ್ನು ಸಲ್ಲಿಸಲು ಇಚ್ಛಿಸುವವರು ಈ ಕಛೇರಿಯಿಂದ ಖರೀದಿಸಿದ ನಿಗದಿತ ಟೆಂಡರ್ ನಮೂನೆಯಲ್ಲಿ ಮಾತ್ರ ಸಲ್ಲಿಸಬೇಕು. ಈ ಕಛೇರಿಯಿಂದ ಪಡೆದ ಟೆಂಡರ್ ಫಾರಂನಲ್ಲಿ ದರವನ್ನು ನಮೂದಿಸಿರುವ ಟೆಂಡರ್ ಮಾತ್ರ ಒಪ್ಪಿಕೊಳ್ಳಲಾಗುವುದು. ಟೆಂಡರ್‌ನಲ್ಲಿ ಯಾವುದೇ ತಪ್ಪು ಓದಲಾಗದಂತೆ ಬರೆದಿರಬಾರದು. ಸ್ವಚ್ಛವಾಗಿ ನಮೂದಿಸಿರಬೇಕು. ಟೆಂಡರ್‌ನಲ್ಲಿ ಯಾವುದೇ ಪೂರ್ವ ಷರತ್ತುಗಳನ್ನು ನಮೂದಿಸಕೂಡದು.
5. ಯಶಸ್ವಿ ಟೆಂಡರ್‌ದಾರರ : ಅಂತಿಮ ಮೊತ್ತದ ಶೇಕಡ 50 ಭಾಗದ ಹಣವನ್ನು ಟೆಂಡರ್ ಮುಗಿದ ತಕ್ಷಣ ಸ್ಥಳದಲ್ಲಿಯೇ ಪಾವತಿಸಿ ರಶೀದಿ ಪಡೆಯುವುದು. ಉಳಿದ ಶೇಕಡ 50 ಭಾಗದ ಹಣವನ್ನು ತೋಟಗಾರಿಕೆ ನಿರ್ದೇಶಕರವರಿಂದ ಅನುಮೋದಿಸುವ ದಿನಾಂಕದಿಂದ ಅಥವಾ ಈ ಕಛೇರಿಯಿಂದ ಹಣ ಪಾವತಿಸಲು ಸೂಚಿಸಿದ ದಿನಾಂಕದಿಂದ 3 ದಿನಗಳೊಳಗೆ ಈ ಕಛೇರಿಗೇ ಕಟ್ಟಬೇಕು. ತಪ್ಪಿದಲ್ಲಿ ಟೆಂಡರ್‌ಗಾಗಿ ಕಟ್ಟಿರುವ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆ. ಹಾಗೂ ಅವರ ಟೆಂಡರ್‌ನ್ನು ತಿರಸ್ಕರಿಸಲಾಗುವುದು.
6. ಟೆಂಡರ್‌ನ್ನು ಮೊಹರು ಮಾಡಿದ ಲಕೋಟೆಯಲ್ಲಿಟ್ಟು ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು ಇವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆ ಮೇಲೆ ಕಬ್ಬನ್ ಉದ್ಯಾನವನದಲ್ಲಿ ವಾಹನ ನಿಲುಗಡೆ ಶುಲ್ಕ ವಸೂಲಾತಿಗೆ ಟೆಂಡರ್ ಎಂದು ನಮೂದಿಸಿರಬೇಕು. ಹಾಗೂ ನಿಗದಿತ ಅವಧಿಯೊಳಗೆ ಈ ಕಛೇರಿಗೇ ಕಳುಹಿಸಬೇಕು.
7. ಟೆಂಡರ್‌ದಾರರು ಶುಲ್ಕ ವಸೂಲಾತಿ ಮಾಡುವ ವಾಹನ ನಿಲುಗಡೆ ಜಾಗವನ್ನು ಮೊದಲು ವೀಕ್ಷಿಸಬೇಕು.
8. ಯಶಸ್ವಿ : ಟೆಂಡರ್‌ದಾರರು ಅಂತಿಮ ಸವಾಲಿನ ಹಣವನ್ನು ಅನುಮೋದಿಸಿದ ನಂತರ ವಾಹನ ನಿಲುಗಡೆ ಶುಲ್ಕ ವಸೂಲಿ ಕಾರ್ಯವನ್ನು ವಹಿಸಿಕೊಳ್ಳುವ ಮೊದಲು ರೂ.100-00 ಮೌಲ್ಯದ ಛಾಪಾ ಕಾಗದದ ಮೇಲೆ ಟೆಂಡರ್‌ನ ಎಲ್ಲಾ ಷರತ್ತು ಮತ್ತು ನಿಬಂಧನೆಗಳಿಗೆ ಬದ್ಧನಾಗಿರುತ್ತೇನೆ ಎಂಬುದಾಗಿ ಕರಾರು ಪತ್ರವನ್ನು ಬರೆದು ಈ ಕಛೇರಿಗೆ ಸಲ್ಲಿಸಬೇಕು.
9. ವಾಹನ ನಿಲುಗಡೆ ಶುಲ್ಕವನ್ನು ಬೆಳಿಗ್ಗೆ 8.00 ಗಂಟೆಯಿಂದ ರಾತ್ರಿ 7.00 ಗಂಟೆಯ ಅವಧಿಯಲ್ಲಿ ಈ ಮುಂದೆ ಸೂಚಿಸಿದ ದರದಲ್ಲಿ ಮಾತ್ರ ನಿಗದಿಪಡಿಸಿದ ಸ್ಥಳದಲ್ಲಿ ಮಾತ್ರ ವಸೂಲಿ ಮಾಡಬೇಕು. (ಸರ್ಕಾರಿ ವಾಹನ ಮತ್ತು ಇಲಾಖಾ ನೌಕರರ ವಾಹನ ಹೊರತುಪಡಿಸಲಾಗಿದೆ) ವಾಹನ ನಿಲುಗಡೆ ಸ್ಥಳವನ್ನು ಸದಾ ಸ್ವಚ್ಛವಾಗಿಸಿಕೊಳ್ಳಬೇಕು. ಈ ಸ್ಥಳವನ್ನು ಬೇರೆ ಉದ್ದೇಶಕ್ಕೆ ಬಳಸಬಾರದು. ಯಾವುದೇ ರೀತಿ ಸ್ಟ್ರಕ್ಚರ್ ಹಾಕಬಾರದು.

| ಶುಲ್ಕ ದರ | ಮೊದಲ 3 ಗಂಟೆ ಅವಧಿಗೆ ನಂತರದ ಹೆಚ್ಚುವರಿ ಅವಧಿಗೆ | |
|---|---|---|
| ವಾಹನಗಳ ವಿವರ | ರೂ. | ಅವಧಿಗೆ ರೂ. |
| 1. ಬೈಸಿಕಲ್ ಒಂದಕ್ಕೆ | 1.00 | 2.00 |
| 2. ದ್ವಿಚಕ್ರ ವಾಹನ ಒಂದಕ್ಕೆ | 3.00 | 6.00 |
| 3. ಕಾರು ಒಂದಕ್ಕೆ | 5.00 | 10.00 |
| 5. ಮೆಟಡಾರ್, ಮ್ಯಾಕ್ಸಿಕ್ಯಾಬ್ ವ್ಯಾನ್, ಮುಂತಾದ ಲಘು ವಾಹನಗಳಿಗೆ | 20.00 | 40.00 |

ಸರ್ಕಾರಿ ವಾಹನಗಳಿಗೆ ಉಚಿತ ನಿಲುಗಡೆ ಒದಗಿಸತಕ್ಕದ್ದು.

(ಲಾರಿ ಮತ್ತು ಭಾರಿ ವಾಹನಗಳನ್ನು ಕಬ್ಬನ್ ಉದ್ಯಾನವನದೊಳಗೆ ಬರುವುದನ್ನು ನಿಷೇಧಿಸಲಾಗಿದೆ)

10. ವಾಹನ ನಿಲುಗಡೆ ಶುಲ್ಕ ವಸೂಲಾತಿ ಮಾಡುವ ಅವಧಿಗೆ ಮತ್ತು ದರಗಳ ಬಗ್ಗೆ ಈ ಕಛೇರಿಯ ಅಧಿಕಾರಿಗಳು ಸೂಚಿಸುವ ಸ್ಥಳದಲ್ಲಿ ಸಾರ್ವಜನಿಕರ ಗಮನಕ್ಕೆ ಸ್ಪಷ್ಟವಾಗಿ ಬೋರ್ಡ್ ಮೇಲೆ ಪ್ರಕಟಿಸಬೇಕು. ವಾಹನ ಶುಲ್ಕ ವಸೂಲಾತಿಗೆ ನಿಗದಿತ ದರದಲ್ಲಿ ಯಶಸ್ವಿ ಟೆಂಡರ್‌ದಾರರು ಸ್ವಂತ ಖರ್ಚಿನಿಂದ ಮುದ್ರಿಸುವ ಟಿಕೆಟ್‌ಗಳನ್ನು ಮಾತ್ರ ಉಪಯೋಗಿಸಬೇಕು. ಸಿರಿಯಲ್ ನಂಬರ್‌ನ ಟಿಕೆಟ್ ಬಳಸಬೇಕು. ಕೌಂಟರ್ ಫಾಯಿಲ್ ಇಡಬೇಕು. ಶುಲ್ಕ ವಸೂಲಾತಿ ದರ, ಸ್ಥಳ ದಿನಾಂಕ: ವಾಹನ ಸಂಖ್ಯೆ: ವಾಹನ ಬಂದ ಮತ್ತು ತೆರಳಿದ ಸಮಯ ಟಿಕೆಟ್‌ನಲ್ಲಿ ನಮೂದಿಸಬೇಕು.
    ಅ) ವಾಹನ ನಿಲುಗಡೆ ತಾಣವನ್ನು ಅವಶ್ಯಕತೆಗನುಣವಾಗಿ ಬದಲಿಸುವ ಹಕ್ಕು ಕೆಳಗೆ ಸಹಿ ಮಾಡಿದವರಿಗಿರುತ್ತದೆ. ಟೆಂಡರ್‌ದಾರರು ಈ ಬದಲಾವಣೆಗೆ ಬದ್ಧರಾಗಿರಬೇಕು.
    ಆ) ಯಶಸ್ವಿ ಟೆಂಡರ್‌ದಾರರು, ವಾಹನದಾರರು, ಇಲಾಖಾ ಸಿಬ್ಬಂದಿ ಮತ್ತು ತೆರಳಿದ ಸಾರ್ವಜನಿಕರ ಜೊತೆ ಸೌಜನ್ಯದಿಂದ ವರ್ತಿಸತಕ್ಕದ್ದು ಹಾಗೂ ಯಾವುದೇ ದೂರಿಗೂ ಆಸ್ಪದ ನೀಡಬಾರದು. ಈ ಬಗೆಗಿನ ದೂರುಗಳು ಹೆಚ್ಚಿದಲ್ಲಿ ಟೆಂಡರ್‌ದಾರರ ಗುತ್ತಿಗೆ ರದ್ದುಪಡಿಸಲಾಗುವುದು.
11. ವಾಹನ ನಿಲುಗಡೆ ಶುಲ್ಕ ವಸೂಲಾತಿಗೆ ಟೆಂಡರ್ ಅವಧಿಯನ್ನು ಯಾವುದೇ ಕಾರಣಕ್ಕೂ ವಿಸ್ತರಿಸಲಾಗುವುದಿಲ್ಲ. ಹಾಗೂ ನಿಗದಿಪಡಿಸಿರುವ ದರಗಳನ್ನು ಪರಿಷ್ಕರಿಸಲಾಗುವುದಿಲ್ಲ. ಯಶಸ್ವಿ ಟೆಂಡರ್‌ದಾರರು ಅನಧಿಕೃತವಾಗಿ ಹೆಚ್ಚಾಗಿ ಟಿಕೆಟ್ ದರ ವಸೂಲಿ ಮಾಡಬಾರದು ಹಾಗೆ ಮಾಡಿದಲ್ಲಿ ದಂಡ ವಸೂಲಿ ಜೊತೆಗೆ ಟೆಂಡರ್ ರದ್ದುಪಡಿಸಲಾಗುತ್ತದೆ. ಹಾಗೂ ಇ.ಎಂ.ಡಿ. ಮತ್ತು ಬ್ಯಾಂಕ್ ಗ್ಯಾರಂಟಿ ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆ.
12. ವಾಹನ ನಿಲುಗಡೆ ಶುಲ್ಕ ವಸೂಲಾತಿ ಮಾಡಿದ ನಂತರ ವಾಹನ ಸುರಕ್ಷತೆಯ ಜವಾಬ್ದಾರಿಯು ಟೆಂಡರ್‌ದಾರರದ್ದು ಆಗಿರುತ್ತದೆ. ಇಲಾಖೆ ಜವಾಬ್ದಾರಿ ಇರುವುದಿಲ್ಲ. ಹಾಗೂ ಪ್ರತಿ ವಾಹನಕ್ಕೆ ಪ್ರತ್ಯೇಕ ಟೋಕನ್ ನೀಡಬೇಕು. ಶುಲ್ಕ ವಸೂಲಾತಿಗೆ ಟೆಂಡರ್‌ದಾರರೇ ಸೂಕ್ತ ವ್ಯಕ್ತಿಗಳನ್ನು ನೇಮಿಸಿಕೊಳ್ಳಬೇಕು ಹಾಗೂ ಅವರಿಗೆ ಗುರುತಿನ ಚೀಟಿ ಯೂನಿಫಾರಂ ನೀಡಿರಬೇಕು.
13. ಯಶಸ್ವಿ ಟೆಂಡರ್‌ದಾರರು ಅಂತಿಮ ಸವಾಲಿನ ಹಣದಷ್ಟೆ ಮೊತ್ತಕ್ಕೆ ಷೆಡ್ಯೂಲ್ ಬ್ಯಾಂಕಿನಿಂದ ಬ್ಯಾಂಕ್ ಗ್ಯಾರಂಟಿ ಪಡೆದು ಒದಗಿಸಬೇಕು. ಹಾಗೂ ಬ್ಯಾಂಕ್ ಗ್ಯಾರಂಟಿ ಅವಧಿಯ ವಾಹನ ನಿಲುಗಡೆ ಶುಲ್ಕ ವಸೂಲಾತಿಯ ಪೂರ್ಣ ಅವಧಿಯನ್ನು ಒಳಗೊಂಡಿರಬೇಕು. ಯಶಸ್ವಿ ಟೆಂಡರ್‌ದಾರರು ಯಾವುದೇ ಷರತ್ತುಗಳನ್ನು ಉಲ್ಲಂಘಿಸಿ ವರ್ತಿಸಿದಲ್ಲಿ ಅವರ ಬ್ಯಾಂಕ್ ಗ್ಯಾರಂಟಿಯನ್ನು ಇ.ಎಂ.ಡಿ. ಹಣದ ಜೊತೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
14. ಯಶಸ್ವಿ ಟೆಂಡರ್‌ದಾರರು ಶುಲ್ಕ ವಸೂಲಾತಿ ಹಕ್ಕನ್ನು ಬೇರೆಯವರಿಗೆ ಪರಭಾರೆ ವರ್ಗಾವಣೆ ಮಾಡಬಾರದು ಹಾಗೂ ಟೆಂಡರ್‌ದಾರರಿಗೆ ಆಗುವ ಯಾವುದೇ ನಷ್ಟಕ್ಕೆ ಇಲಾಖೆ ಜವಾಬ್ದಾರಿಕೆ ಇರುವುದಿಲ್ಲ.
15. ಟೆಂಡರ್‌ನ್ನು ಯಾವುದೇ ಕಾರಣ ನೀಡದೇ ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ರವರಲ್ಲಿ ಕಾಯ್ದಿರಿಸಲಾಗಿದೆ.
    ಅ) ಟೆಂಡರ್ ಪ್ರಕ್ರಿಯೆ ಮೂಲಕ ನಿರೀಕ್ಷಿತ ಮಟ್ಟದ ಮೊತ್ತವು ಟೆಂಡರ್‌ದಾರರಿಂದ ಸೂಚಿತವಾಗದಿದ್ದ ಪಕ್ಷದಲ್ಲಿ ಮರು ಟೆಂಡರ್ ಮಾಡುವ ಹಕ್ಕನ್ನು ಈ ಕೆಳಗೆ ಸಹಿ ಮಾಡಿದವರು ಹೊಂದಿರುತ್ತಾರೆ.
16. ಟೆಂಡರ್‌ದಾರರು ಕಳೆದ ಸಾಲಿನಲ್ಲಿ ಇನ್‌ಕಮ್ ಟ್ಯಾಕ್ಸ್ ಕ್ಲಿಯರ್‌ನ್ನು ಮಾಡಿದ ದೃಢೀಕರಣ ಪತ್ರವನ್ನು ಆದಾಯ ತೆರಿಗೆ ಇಲಾಖೆಯಿಂದ ಪಡೆದು ಸಲ್ಲಿಸಬೇಕು.
17. ಮೇಲೆ ವಿಧಿಸಿರುವ ನಿಬಂಧನೆಗಳು ಮತ್ತು ಷರತ್ತುಗಳನ್ನು ಟೆಂಡರ್‌ದಾರರು ಪಾಲಿಸದಿದ್ದಲ್ಲಿ ಟೆಂಡರ್ ಷರತ್ತು ಉಲ್ಲಂಘಿಸಿದ ಕಾರಣಕ್ಕಾಗಿ ಕಟ್ಟಿರುವ ಪೂರ್ಣ ಟೆಂಡರ್ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ ಟೆಂಡರ್ ತಿರಸ್ಕರಿಸಲಾಗುತ್ತದೆ.

ತೋಟಗಾರಿಕೆ ಉಪ ನಿರ್ದೇಶಕರು,
ಪಿ.ಆರ್. 365 ಕಬ್ಬನ್ ಉದ್ಯಾನವನ, ಬೆಂಗಳೂರು-1.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಕಾವೇರಿ ವನ್ಯ ಜೀವಿ ವಿಭಾಗ, ಕನಕಪುರ

## ಸಂಕ್ಷಿಪ್ತ ಟೆಂಡರ್ ಅಧಿಸೂಚನೆ

**ಸಂಖ್ಯೆ: ಎ3/ಬಿಯುಡಿ/ಸಿಆರ್-25/2005-06, ದಿನಾಂಕ: 25ನೇ ಜೂನ್ 2005**

**ವಿಷಯ:** ಕಾವೇರಿ ವನ್ಯ ಜೀವಿ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ನಿರ್ಮಾಣ ಕಾಮಗಾರಿಯನ್ನು ಕೈಗೊಳ್ಳಲು ಟೆಂಡರ್ ಕರೆಯುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ ಕಾವೇರಿ ವನ್ಯ ಜೀವಿ ವಿಭಾಗದಲ್ಲಿ ನೋಂದಾಯಿತ ಅರಣ್ಯ ಗುತ್ತಿಗೆದಾರರಿಂದ ಕಾವೇರಿ ವನ್ಯ ಜೀವಿ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಕೈಗೊಳ್ಳುವ ಸಲುವಾಗಿ ಮೊಹರಾದ ಟೆಂಡರನ್ನು ದಿನಾಂಕ: 22.07.2005 ರಂದು ಮಧ್ಯಾಹ್ನ 3.00 ಗಂಟೆಗೆ ಕರೆಯಲಾಗಿದೆ. ಹೀಗೆ ಸ್ವೀಕರಿಸಲಾದ ಟೆಂಡರನ್ನು ಅದೇ ದಿನ ಅದೇ ಸಮಯಕ್ಕೆ

ಹಾಜರಿರುವ ಗುತ್ತಿಗೆದಾರರ ಸಮಕ್ಷಮದಲ್ಲಿ ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳು ಅಥವಾ ಅವರಿಂದ ಅಧಿಕಾರ ಪಡೆದ ಅಧಿಕಾರಿಗಳಿಂದ ತೆರೆದು ಓದಿ ದಾಖಲಿಸಲಾಗುವುದು. ಒಂದು ವೇಳೆ ಈ ದಿನ ಸಾರ್ವತ್ರಿಕ ರಜಾದಿನ ಎಂದು ಘೋಷಿಸಿದಲ್ಲಿ ಟೆಂಡರನ್ನು ಮರುದಿನ ಇದೇ ಸಮಯಕ್ಕೆ ಮುಂದೂಡಿ ನಡೆಸಲಾಗುವುದು.

ಟೆಂಡರ್ ಫಾರಂಗಳನ್ನು ದಿನಾಂಕ: 21.07.2005 ರಂದು ಸಂಜೆ 5.00 ಗಂಟೆವರೆಗೆ ರೂ.200/- ಮತ್ತು ಚಾಲ್ತಿಯಲ್ಲಿರುವ ತೆರಿಗೆಯನ್ನು ಪಾವತಿಸಿ ಈ ಕಛೇರಿಯಿಂದ ಪಡೆಯಬಹುದಾಗಿದೆ. ಹಾಗೂ ಮೊಹರಾದ ಟೆಂಡರ್ ಫಾರಂಗಳನ್ನು ದಿನಾಂಕ: 22.07.2005 ರಂದು ಮಧ್ಯಾಹ್ನ 1.30 ಗಂಟೆವರೆಗೆ ಈ ಕಛೇರಿಯಲ್ಲಿ ಸ್ವೀಕರಿಸಲಾಗುವುದು. ಕಾಮಗಾರಿಗಳ ವಿವರಗಳು ಕೆಳಕಂಡಂತೆ ಇರುತ್ತವೆ.

| ಕ್ರ. ಸಂ. | ಕಾಮಗಾರಿಯ ವಿವರ | ಕೆಲಸದ ಸ್ಥಳ | ಅಂದಾಜು ಮೊತ್ತ | ಇ.ಎಂ.ಡಿ. ಮೊಬಲಗು | ಕೆಲಸ ಪೂರ್ಣ ಗೊಳಿಸಬೇಕಾದ ದಿನಾಂಕ |
|---|---|---|---|---|---|
| 1 | ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ಕಟ್ಟಡ ನಿರ್ಮಾಣ ಕಾಮಗಾರಿ | ಕನಕಪುರ | 10,00,000.00 | 20,000.00 | 31.3.2006 |

**ಷರತ್ತುಗಳು**

1. ಟೆಂಡರಿನಲ್ಲಿ ಭಾಗವಹಿಸುವ ಗುತ್ತಿಗೆದಾರರು ತುಂಬಿದ ಟೆಂಡರ್ ಫಾರಂನ ಜೊತೆಗೆ ತಿಳಿಸಿರುವ 20,000/- ಇ.ಎಂ.ಡಿ. ಹಣವನ್ನು ಬ್ಯಾಂಕ್ ಡಿ.ಡಿ. ರೂಪದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾವೇರಿ ವನ್ಯ ಜೀವಿ ವಿಭಾಗ ಕನಕಪುರ ರವರ ಹೆಸರಿನಲ್ಲಿ ಸಲ್ಲಿಸಬೇಕು.
2. ಮೇಲೆ ತಿಳಿಸಿರುವ ಕೆಲಸವು ಅಂದಾಜಿನದ್ದಾಗಿದ್ದು ಯಾವುದೇ ಕಾರಣವಿಲ್ಲದೆ ಬದಲಾವಣೆಗೆ ಒಳಪಟ್ಟಿರುತ್ತದೆ ಮತ್ತು ಈ ಬಗ್ಗೆ ಅಂತಿಮ ತೀರ್ಮಾನ ಉಪ ಅರಣ್ಯ ಸಂರಕ್ಷಣಾಧಿಕಾರಿಗಳದ್ದಾಗಿರುತ್ತದೆ.
3. ಈ ಟೆಂಡರ್ ಅಧಿಸೂಚನೆಯಲ್ಲಿ ನಮೂದಿಸಿರುವ ಷರತ್ತುಗಳಲ್ಲದೆ ವಿವರವಾದ ಟೆಂಡರ್ ಅಧಿಸೂಚನೆಯಲ್ಲಿ ನಮೂದಿಸಿರುವ ಎಲ್ಲಾ ಷರತ್ತುಗಳಿಗೂ ಗುತ್ತಿಗೆದಾರರು ಒಳಪಟ್ಟಿರಬೇಕಾಗುತ್ತದೆ.
4. ಟೆಂಡರನ್ನು ಯಾವುದೇ ಕಾರಣ ನೀಡದೆ ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾವೇರಿ ವನ್ಯ ಜೀವಿ ವಿಭಾಗ, ಕನಕಪುರ ಇವರಲ್ಲಿ ಕಾಯ್ದಿರಿಸಿದೆ.
5. ಟೆಂಡರ್‌ನಲ್ಲಿ ಯಾವುದೇ ತಂಟೆತಕರಾರುಗಳು ಬಂದಲ್ಲಿ ಅರಣ್ಯ ಸಂರಕ್ಷಣಾಧಿಕಾರಿಗಳು, ಚಾಮರಾಜನಗರ ವೃತ್ತ, ಚಾಮರಾಜನಗರ ಇವರು ಕೈಗೊಳ್ಳುವ ತೀರ್ಮಾನವು ಅಂತಿಮವಾಗಿರುತ್ತದೆ.
6. ಟೆಂಡರ್‌ನಲ್ಲಿ ಯಶಸ್ವಿಯಾದ ಗುತ್ತಿಗೆದಾರರಿಗೆ ಕಾಮಗಾರಿಯು ಪೂರ್ಣಗೊಂಡ ನಂತರ ಹಣದ ಲಭ್ಯತೆಯ ಆಧಾರದ ಮೇಲೆ ಬಿಲ್ಲಿನ ಹಣವನ್ನು ಪಾವತಿಸಲು ಕ್ರಮಕೈಗೊಳ್ಳಲಾಗುವುದು.
7. ಹೆಚ್ಚಿನ ಮಾಹಿತಿಗಾಗಿ ಈ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದಾಗಿದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಪಿ.ಆರ್. 360 ಕಾವೇರಿ ವನ್ಯ ಜೀವಿ ವಿಭಾಗ, ಕನಕಪುರ.

## ಜಲ ಸಂಪನ್ಮೂಲ ಇಲಾಖೆ

## ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ

## ಅಲ್ಪಾವಧಿ ಟೆಂಡರ್ ಪ್ರಕಟಣೆ

**ಸಂಖ್ಯೆ: ಬಿಡಿಯನ್-4 ಪಿ.ಬಿ.-4:ಟೆಂಡರು ಪ್ರಕಟಣೆ:2005-06:1018/10, ದಿನಾಂಕ: 20ನೇ ಜೂನ್ 2005**

ಮೊಹರಾದ ಐಟಂವಾರು ಟೆಂಡರ್‌ಗಳನ್ನು ನಿಗದಿತ ನಮೂನೆಯಲ್ಲಿ ದ್ವಿಪ್ರತಿಗಳಲ್ಲಿ ಈ ಕೆಳಕಾಣಿಸಿರುವ ಕಾಮಗಾರಿಗಳಿಗೆ ನೋಂದಾಯಿಸಲ್ಪಟ್ಟಿರುವ ಅರ್ಹ ಗುತ್ತಿಗೆದಾರರಿಂದ ಕರ್ನಾಟಕ ರಾಜ್ಯಪಾಲರ ಪರವಾಗಿ ಕಾರ್ಯಪಾಲಕ ಇಂಜಿನಿಯರ್, ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ ಇವರಿಂದ ಆಹ್ವಾನಿಸಲಾಗಿದೆ.

ತುಂಬಲಾದ ಟೆಂಡರ್‌ಗಳನ್ನು ದಿನಾಂಕ: 19.7.2005 ಸಂಜೆ 4.00 ಗಂಟೆಗೆ ಈ ಕಛೇರಿಯಲ್ಲಿ ಸ್ವೀಕರಿಸಲಾಗುವುದು. ಹಾಗೂ ಟೆಂಡರುಗಳನ್ನು ಸಾಧ್ಯವಾದಲ್ಲಿ ಅದೇ ದಿನ ಸಂಜೆ 4.30 ಗಂಟೆಗೆ ಅಥವಾ ಇನ್ನಾವುದೇ ದಿನದಂದು ಕಛೇರಿಯಲ್ಲಿ ಹಾಜರಿರುವ ಟೆಂಡರ್‌ದಾರರ ಅಥವಾ ಇನ್ನಾವುದೇ ನೋಂದಾಯಿತ ಗುತ್ತಿಗೆದಾರರ ಸಮಕ್ಷಮದಲ್ಲಿ ತೆರೆಯಲಾಗುವುದು.

| | | |
|---|---|---|
| 1 | ನಿಗದಿತ ಖಾಲಿ ಟೆಂಡರ್ ಫಾರಂಗಳನ್ನು ಕೋರಿ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕ | 16.7.2005 ಸಂಜೆ 5.30 ರವರೆಗೆ |
| 2 | ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ | 18.07.2005 |
| 3 | ತುಂಬಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ | 19.07.2005 |
| 4 | ಕೆಲಸವನ್ನು ಮುಗಿಸುವ ಅವಧಿ | ಎರಡು ತಿಂಗಳು |
| 5 | ಟೆಂಡರ್ ಕರೆ | ಎರಡನೇ ಕರೆ |

ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು. ಟೆಂಡರ್‌ನಲ್ಲಿ ಸೂಚಿಸಿರುವ ದಿನಾಂಕಗಳು ರಜಾ ದಿನವೆಂದು ಘೋಷಿಸಲ್ಪಟ್ಟರೆ ಮುಂದಿನ ಕೆಲಸದ ದಿನವನ್ನು ಟೆಂಡರಿನಲ್ಲಿ ತಿಳಿಸಿದ ದಿನಾಂಕದ ಬದಲಾಗಿ ಪರಿಗಣಿಸಲಾಗುವುದು.

| ಕ್ರ. ಸಂ. | ಕೆಲಸದ ಹೆಸರು | ಟೆಂಡರ್‌ಗೆ ಇಡಲಾದ ಮೊತ್ತ | ಇ.ಎಂ.ಡಿ. | ಟೆಂಡರ್ ಫಾರಂ ಬೆಲೆ (ತೆರಿಗೆಗಳು ಪ್ರತ್ಯೇಕ) ಹಿಂದಿರುಗಿಸಲಾಗದ ಮೊತ್ತ | ಗುತ್ತಿಗೆದಾರರ ದರ್ಜೆ |
|---|---|---|---|---|---|
| 1 | ಶಿಕಾರಿಪುರದಿಂದ ಚನ್ನಗಳ್ಳಿಗೆ ಹೋಗುವ ಐ.ಟಿ. ರಸ್ತೆಯಲ್ಲಿ ಬರುವ ಕಾಸುವೇ ಸರ್ಕಲ್‌ನಿಂದ ಕುಮದ್ವತಿ ನದಿಗೆ ಹೋಗುವ ಕಿ.ಮೀ. 2.25 ರಿಂದ ಕಿ.ಮೀ 4.10 ರವರೆಗೆ ರಸ್ತೆ ಅಭಿವೃದ್ಧಿ ಮತ್ತು ಡಾಂಬರೀಕರಣ | 7,98,093/- | 15,965/- | 1000/- | ಮೂರನೇ ದರ್ಜೆ ಮತ್ತು ಮೇಲ್ಪಟ್ಟು |

**ಸೂಚನೆಗಳು:**

1) ನಿಗದಿತ ಟೆಂಡರ್ ಫಾರಂನಲ್ಲಿ ಕಾಮಗಾರಿಯ ವಿವರಗಳನ್ನು ಮತ್ತು ಟೆಂಡರಿನ ಷರತ್ತುಗಳನ್ನು ಒದಗಿಸಲಾಗಿದೆ. ಟೆಂಡರುದಾರರು ಹಾಕುವಾಗ ಪಾಲಿಸಬೇಕಾಗಿರುವ ನಿಬಂಧನೆಗಳನ್ನು ಸಹ ಒದಗಿಸಲಾಗಿದೆ. ಅದರಂತೆ ಟೆಂಡರ್ ಹಾಕಬೇಕು.
2) ಇ.ಎಂ.ಡಿ. ಮೊತ್ತವನ್ನು ಕರ್ನಾಟಕ ಸರ್ಕಾರದ ಟ್ರಜರಿ ಚಲನ್, ಡಿಮ್ಯಾಂಡ್ ಡ್ರಾಫ್ಟ್, ಬ್ಯಾಂಕರ್ಸ್ ಚೆಕ್, ಎಫ್.ಡಿ.ಆರ್. ಟಿ.ಡಿ.ಆರ್. ಮತ್ತು ಬ್ಯಾಂಕ್ ಗ್ಯಾರಂಟಿಗಳನ್ನು ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ಮಾತ್ರ ಸೂಚಿಸಿರುವ ಮೊತ್ತಕ್ಕೆ ಕಾರ್ಯಪಾಲಕ ಇಂಜಿನಿಯರ್ ನಂ4 ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ ಇವರ ಹೆಸರಿನಲ್ಲಿ ಪಾವತಿಸಿರಬೇಕು. ನ್ಯಾಷನಲ್ ಸೇವಿಂಗ್ಸ್ ಸರ್ಟಿಫಿಕೇಟನ್ನು ಕಾರ್ಯಪಾಲಕ ಇಂಜಿನಿಯರ್ ಹೆಸರಿನಲ್ಲಿ ಪ್ಲೆಡ್ಜ್ ಮಾಡಿರಬೇಕು. ತಪ್ಪಿದಲ್ಲಿ ಅಂತಹ ಟೆಂಡರುಗಳನ್ನು ತಿರಸ್ಕರಿಸಲಾಗುವುದು.
3) ಯಾವುದೇ ನಿಬಂಧನೆಗಳನ್ನು ಒಳಗೊಂಡ ಟೆಂಡರುಗಳನ್ನು ಒಪ್ಪಿಕೊಳ್ಳಲಾಗುವುದಿಲ್ಲ.
4) ಇ.ಎಂ.ಡಿ. ಯ ಶೇವಣಿ ಕ್ರಮಬದ್ಧತೆಯು (ವ್ಯಾಲಿಡಿಟಿಪೀರಿಯಡ್) ನೂರ ಇಪ್ಪತ್ತು ದಿನಗಳ ಅವಧಿಯನ್ನು ಒಳಗೊಂಡಿರಬೇಕಾಗಿರುತ್ತದೆ.
5) ಇತ್ತೀಚಿನ ಸೇಲ್ಸ್ ಟ್ಯಾಕ್ಸ್ ಕ್ಲಿಯರೆನ್ಸ್ ಸರ್ಟಿಫಿಕೇಟನ್ನು ಅರ್ಜಿಯೊಂದಿಗೆ ಸಲ್ಲಿಸಬೇಕು.
6) ಟೆಂಡರನ್ನು ಯಾವುದೇ ಕಾರಣವಿಲ್ಲದೆ ಮುಂದೂಡುವ ಸ್ವೀಕರಿಸುವ, ತಿರಸ್ಕರಿಸುವ ಅಧಿಕಾರವು ಕಾರ್ಯಪಾಲಕ ಇಂಜಿನಿಯರ್ ಇವರಿಗೆ ಇರುತ್ತದೆ.
7) ಇಲಾಖಾವತಿಯಿಂದ ಯಾವುದೇ ಕಾಮಗಾರಿ ನಿರ್ಮಾಣ ವಸ್ತುಗಳನ್ನು ವಿತರಿಸಲಾಗುವುದಿಲ್ಲ. ಗುತ್ತಿಗೆದಾರರೇ ಸ್ವಂತ ಏರ್ಪಾಟು ಮಾಡಿಕೊಳ್ಳತಕ್ಕದ್ದು.
8) ಜೇಷ್ಠತೆಯ ಆಧಾರದ ಮೇಲೆ ಗುತ್ತಿಗೆದಾರರ ವಿಪತ್ರಗಳನ್ನು ಪಾವತಿಸಲಾಗುವುದು.
9) ಖಾಲಿ ಟೆಂಡರ್ ಪುಸ್ತಕಗಳನ್ನು ಖರೀದಿಸಿ ಕ್ರಮಬದ್ಧವಾಗಿ ಟೆಂಡರ್ ಹಾಕದೇ ಇದ್ದ ಮತ್ತು ಮೂರು ಬಾರಿ ಪುನರಾವರ್ತನೆ ಮಾಡಿದ ಗುತ್ತಿಗೆದಾರರು ಮುಂದಿನ ಟೆಂಡರ್‌ಗೆ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.
10) ಗುತ್ತಿಗೆದಾರರು 20.00 ಲಕ್ಷ ರೂ.ಗಳ ಮೇಲ್ಪಟ್ಟು ಪ್ರಕಟಣೆಯಲ್ಲಿರುವ ಕಾಮಗಾರಿಗಳ ಬಗ್ಗೆ ಈ ಹಿಂದೆ ಮಾಡಿದ ವಿವರಗಳನ್ನು ಅರ್ಜಿ ಜೊತೆಗೆ ಒದಗಿಸಬೇಕು.

**ಹೆಚ್.ಎನ್. ಮೂರ್ತಿ**

ಪಿ.ಆರ್. 362 ಕಾರ್ಯಪಾಲಕ ಅಭಿಯಂತರರು, ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ.

**ಕರ್ನಾಟಕ ಲೋಕಸೇವಾ ಆಯೋಗ**

**ಲೋಕಸೇವಾ ಆಯೋಗದ ಕಛೇರಿ, "ಪಾರ್ಕ್ ಹೌಸ್", ಬೆಂಗಳೂರು**

**ತಿದ್ದುಪಡಿ ಸಂಖ್ಯೆ: ಇ.ಪ.(2)1700/2005-06/ಪಿಎಸ್‌ಸಿ, ದಿನಾಂಕ: 24ನೇ ಜೂನ್ 2005**

ದಿನಾಂಕ: 07.10.2004 ರಲ್ಲಿ ಕರ್ನಾಟಕ ರಾಜ್ಯಪತ್ರದ ಭಾಗ-5 ರಲ್ಲಿ ಪ್ರಕಟವಾಗಿರುವ 2004ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ಅದರಲ್ಲಿ ಬೆಂಗಳೂರು ಕೇಂದ್ರಕ್ಕೆ ಸಂಬಂಧಿಸಿದಂತೆ ಅಪೆಂಡಿಕ್ಸ್-'ಬಿ' ಶೀರ್ಷಿಕೆಯಡಿಯಲ್ಲಿ ಎನ್.ಎ.ಎನ್. ಭಾಗ-3 ರಡಿ ಇರುವ ನೋಂದಣಿ ಸಂಖ್ಯೆಗಳೊಂದಿಗೆ ನೋಂದಣಿ ಸಂಖ್ಯೆ: 45033ನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

ಕಾರ್ಯದರ್ಶಿ,

ಪಿ.ಆರ್. 361 ಕರ್ನಾಟಕ ಲೋಕ ಸೇವಾ ಆಯೋಗ, ಬೆಂಗಳೂರು.

**OFFICE OF THE DEPUTY CONSERVATOR OF FORESTS, BIDAR FOREST DIVISION, BIDAR**

**SALE NOTIFICATION**

**No. A6-Bidar/Sale/CR-01/2005-06, dated: 9th June 2005**

It is brought to the notice of the all concerned that following quantities of Eucalyptus timber shall be sold in open public auction in Bidar Forest Office as follows:-

| Sl. No. | Description | Approx Quantity | No. of Lots | E.M.D. | Place & date of Sale |
|---|---|---|---|---|---|
| 1 | 2 | 3 | 4 | 5 | 6 |
| 1 | Eucalyptus Timber | 135.000 cum | 01 to 30 | Rs.5000.00 for each lot | Date: 02.07.2005 at 2.00 AM in Forest Office compound; K.E.B. Road, Bidar. |
| 2 | Eucalyptus Timber | 100.000 cum | 01 to 25 | Rs.5000.00 for each lot | 15th of every month at Division office / concerned Range Office premises at 2.00 PM |

Interested purchases/bidders/timber contractors/Saw Millers may kindly participate in above sale. For further details this office or office of the Range Forest Officer, Bidar/Humnabad/Basavakalyan/Bhalki may be contacted on all working days. The information above exact date & place of sale shall be displayed on the notice board of this office and all Range Office.

Deputy Conservator of Forests,

PR-367 Bidar Forest Division, Bidar.

**PUBLIC WORKS DEPARTMENT**
**(NATIONAL HIGHWAY)**
**Office of The Executive Engineer, National Highway Division,**
**Urva Store, Ashok Nagar, Mangalore-575006**
**TENDER NOTIFICATION (Two Cover Bid System)**
**No: NHD/MNG/AE-1/PR/NIT/2005-06/2141, Dated: 22nd June 2005**

Sealed item rate tenders for the works noted below under TWO COVER BID SYSTEM as per Karnataka Transparency in Public Procurement Ordinance 2000 and Act 2000 in prescribed form in duplicate is invited from the Class-I Contractors registered in K.P.W.D. Two cover bid system of tendering consisting of "Technical Bid" and "Financial Bid". Bids will be received in two parts in two different sealed covers marked as "Technical Bid" and "Financial Bid". These two covers shall be sealed and kept in another sealed cover duly superscribing Name of Work and shall be addressed to the undersigned with name and full postal address of the bidder. Completed bid will be received in the office of the Superintending Engineer, N.H. Circle, Bangalore OR in the office of the Executive Engineer, National Highway Division, Urva Store, Mangalore up to 4 PM on **06.08.2005,** subject to the conditions laid down in Form No. PWG-65 & 66 of KPWD code Vol-II and in Karnataka Transparency in Public Procurement ordinance 2000 and Act 2000. The Technical Bid will be opened by the undersigned on the dates noted below. Financial Bid of only those bidders who qualify in the Technical Bid shall be opened. If any one of the dates noted below happens to be a general holiday, the next working day will hold good.

| Sl. No. | Name of work | Amount put to Tender (in Rs.) | E.M.D. (in Rs.) | Cost of Tender Forms (in Rs.) Non refundable including Taxes | Nature of work | Time for completion of work (Excluding Monsoon) |
|---|---|---|---|---|---|---|
| 1) | Periodical Renewal to NH-13 for 2005-06-from KM 600.00 to 620.00 of Sholapur-Mangalore Section. | 1,15,00,000 | 1,15,000 | 20,000 | SDBC | 7 Months |

**CONDITIONS:**

1. Pre qualification requirements are detailed in the Technical Bid. Each tenderer shall use following machinery and submit evidence of ownership/pocession as detailed below, at the time of submission of application. The documents shall be attested by a District level Officer, or otherwise the application will not be accepted.

| | Machinery | Numbers | Evidence of Ownership to be furnished |
|---|---|---|---|
| 1 | Hot Mix Plant of "Above 40 to 60 T.P.H." capacity (as per MOST specification) | 1 | Purchase invoice/Sale deed with a copy of Purchase invoice from the seller. |
| 2 | Paver Finisher | 1 | - do - |
| 3 | Mechanical sprayers | 2 | - do - |
| 4 | Vibratory Road Roller | 1 | - do - |
| 5 | Static Road Roller | 2 | - do - |
| 6 | Tippers | 4 | Registration Certificate from R.T.O. |

2. The contractors interested in bidding for the work may submit an application to the undersigned along with cost of tender documents to be paid in cash or in the form of DD drawn in favour of the Executive Engineer, National Highway Division, Mangalore payable at Mangalore, along with application. The applicants should submit proof of registration while submitting the application for tender schedules, otherwise the application will not be considered.
3. Each Tenderer should have completed satisfactorily similar works of value not less than 30% of the value of the intended contract (up dated at 10% per annum compoundable) in any one financial year during a block period of previous five financial years. Alternatively the contractor should have completed a billing of 30% of the value of the intended contract during the current financial year for similar works. The work experience certificate in this regard should invariably

have mention of same nature/items of work executed, along with date of commencement and date of completion; otherwise the technical bid is liable for disqualification.

4. For proof of Financial Capacity 'Line of Credit' from any Schedule Bank shall invariably be produced in the prescribed proforma of Technical Bid for an amount equal to 50% of the amount put to tender for works.
5. The **EMD** in the form of FDR/DD/Bankers Cheque/Bank Guarantee drawn from a Nationalised or Scheduled Bank or NSC (Pledged in favour of the undersigned) shall be enclosed to the **Technical Bid.** The Bank Guarantee Shall be in the Form as specified in PWG 66 supplied with the tender form. Otherwise tender will be rejected. Regarding the validity of EMD, tender condition etc. PWG-66 shall be referred and is binding on the tenderer.
6. **The Schedule of dates is as follows:**

| | | |
|---|---|---|
| a) | Last date for receipt of application | 01.08.2005 in office hours |
| b) | Issue of Blank Tender Schedules | 03.08.2005 |
| c) | Last date for submission of Technical & Financial Bid | 06.08.2005 Up to 4.00 PM |
| d) | Opening of Technical Bid | 06.08.2005 at 4.30 PM |

7. All documents enclosed in support of Technical Bids shall be attested by a **DISTRICT LEVEL OFFICER.** Otherwise, the bids are liable for disqualification. The original documents should be produced for verification on the day of opening of Technical Bid or otherwise tenders will be disqualified.
8. Financial Bids of the Technically qualified tenderers will be opened in the office of the Executive Engineer, National Highway Division, Mangalore on the date and time to be intimated in due course.
9. Only relevant certificates and details shall be furnished with the Technical Bid. **Details of company/agencies/Firms profiles need not be enclosed.**
10. The competent authority reserves the right to reject any or all tenders without assigning any reason there off.
11. The tendering by Joint venture is not allowed.

Any other details regarding the work can be obtained from the above office during the office hours.

Executive Engineer,
National Highway Division, Mangalore.

P.R. 366

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ**

**ಟೆಂಡರ್ ಅಧಿಸೂಚನೆ**

**ಸಂಖ್ಯೆ: ಸಿಆಸುಇ 41 ಡಿಇವಿ 2005, ಬೆಂಗಳೂರು, ದಿನಾಂಕ: 25ನೇ ಜೂನ್ 2005**

1) ಕರ್ನಾಟಕ ಸರ್ಕಾರ ಸಚಿವಾಲಯದ ಸೈಕಲ್, ಮೋಟಾರ್ ಸೈಕಲ್ ಹಾಗೂ ಸ್ಕೂಟರ್ ಸ್ಟ್ಯಾಂಡನ್ನು ಈ ಕೆಳಗೆ ಕಾಣಿಸಿರುವ ಸ್ಥಳಗಳಲ್ಲಿ ಗುತ್ತಿಗೆ ಮೇಲೆ ನಡೆಸಲು ಅನುಭವಸ್ಥ ಗುತ್ತಿಗೆದಾರರಿಂದ ಮೊಹರು ಮಾಡಲ್ಪಟ್ಟ ಟೆಂಡರುಗಳನ್ನು ಕರೆಯಲಾಗಿದೆ.

ಅ) ವಿಧಾನಸೌಧದ ಉತ್ತರ ದಿಕ್ಕಿನಲ್ಲಿರುವ ಗ್ಯಾರೇಜ್ ಸಂಖ್ಯೆ: 13 ರಿಂದ 30 ರವರೆಗಿನ ನಿಲುಗಡೆ ಪ್ರದೇಶ ಹಾಗೂ ಪಶ್ಚಿಮ ಮತ್ತು ದಕ್ಷಿಣ ದಿಕ್ಕಿನಲ್ಲಿರುವ ನಿಲುಗಡೆ ಪ್ರದೇಶ

2) ಟೆಂಡರ್ ಕವರಿನ ಮೇಲೆ "ಕರ್ನಾಟಕ ಸರ್ಕಾರ ಸಚಿವಾಲಯದ ಸೈಕಲ್ : ಮೋಟಾರ್ ಸೈಕಲ್, ಸ್ಕೂಟರ್ ಹಾಗೂ ಕಾರ್ ಸ್ಟ್ಯಾಂಡಿನ ಗುತ್ತಿಗೆ ಬಗ್ಗೆ" ಎಂದು ಬರೆದಿರತಕ್ಕದ್ದು ಹಾಗೂ ರೂ.8,000-00 ಇ.ಎಮ್.ಡಿ. ಮೊತ್ತಕ್ಕೆ ಡಿಮ್ಯಾಂಡ್ ಡ್ರಾಫ್ಟ್‌ನ್ನು "ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ)", ಇವರ ಹೆಸರಿಗೆ ಬರೆದು, "ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಕಾರ್ಯಕಾರಿ-1) ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು" ಇವರಿಗೆ ಸಂಬೋಧಿಸಿ ಕಳುಹಿಸತಕ್ಕದ್ದು. ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

3) ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ: 25-7-2005ರ ಮಧ್ಯಾಹ್ನ 3-00 ಗಂಟೆಯವರೆಗೆ.

4) ಟೆಂಡರ್‌ನ್ನು ದಿನಾಂಕ: 25-7-2005ರ ಮಧ್ಯಾಹ್ನ 3-30 ಗಂಟೆಗೆ ಉಪ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ) ಕೊಠಡಿ ಸಂಖ್ಯೆ: 23, ಇವರ ಕೊಠಡಿಯಲ್ಲಿ ತೆರೆಯಲಾಗುವುದು.

5) ಟೆಂಡರ್ ಸಲ್ಲಿಸುವವರು ಒಂದು ವರ್ಷದ ಹಣವನ್ನು ನಮೂದಿಸತಕ್ಕದ್ದು ಮತ್ತು ಈ ಮೊತ್ತವು ರೂ.50,000-00ಕ್ಕಿಂತ (ರೂ. ಐವತ್ತು ಸಾವಿರ ಮಾತ್ರ) ಕಡಿಮೆ ಇರಕೂಡದು.

6) ಯಶಸ್ವಿ ಟೆಂಡರ್‌ದಾರರು ಸೂಚಿಸಲಾಗುವ ಒಂದು ವರ್ಷದ ಟೆಂಡರ್ ಹಣವನ್ನು ಒಂದೇ ಕಂತಿನಲ್ಲಿ ಸರ್ಕಾರಕ್ಕೆ ಪಾವತಿ ಮಾಡತಕ್ಕದ್ದು. ಟೆಂಡರ್ ಹಣವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ "0070-ಇತರ ಆಡಳಿತಾತ್ಮಕ ಸೇವೆಗಳು-ಸಿ-60-ಇತರ ಸೇವೆಗಳು-800-ಇತರ ಸ್ವೀಕೃತಿಗಳು-03-ಸಾಮಾನ್ಯ ಆಡಳಿತ ಸ್ವೀಕೃತಿಗಳು" ಗೆ ಪಾವತಿ ಮಾಡತಕ್ಕದ್ದು.

7) ಯಶಸ್ವಿ ಟೆಂಡರ್‌ದಾರರು ಪಾವತಿ ಮಾಡಿರುವ ಮುಂಗಡ ಹಣ ಮೊತ್ತವನ್ನು ಗುತ್ತಿಗೆ ಷರತ್ತುಗಳನ್ನು ನಿಭಾಯಿಸುವ ಸಲುವಾಗಿ ಸೆಕ್ಯೂರಿಟಿ ಡಿಪಾಸಿಟ್ ಆಗಿ ಪರಿಗಣಿಸಲಾಗುವುದು. ಅಯಶಸ್ವಿ ಟೆಂಡರ್‌ದಾರರ ಮುಂಗಡ ಹಣ ಮೊತ್ತವನ್ನು ಅವರು ಕೋರಿಕೆ ಸಲ್ಲಿಸಿದ ನಂತರ ಮರು ಪಾವತಿ ಮಾಡಲಾಗುವುದು.

8) ಯಾವುದಾದರೊಂದು ಅಥವಾ ಎಲ್ಲಾ ಟೆಂಡರ್‌ಗಳನ್ನು ತಿರಸ್ಕರಿಸಲು ಅಥವಾ ಯಾವುದಾದರೊಂದು ಟೆಂಡರ್‌ನ್ನು ಒಪ್ಪಿಕೊಳ್ಳಲು ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿಗಳಿಗೆ ಪೂರ್ಣ ಹಕ್ಕಿದೆ. ಇದಕ್ಕಾಗಿ ಅವರು ಯಾವುದೇ ಕಾರಣಗಳನ್ನು ನೀಡಬೇಕಾಗಿಲ್ಲ.

9) ಈ ಗುತ್ತಿಗೆಯು ಈ ಕೆಳಗೆ ಕಾಣಿಸಿರುವ ನಿಬಂಧನೆಗಳಿಗೆ ಒಳಪಟ್ಟಿದೆ:-

1. ಈ ಗುತ್ತಿಗೆಯು ದಿನಾಂಕಃ 1-8-2005 ರಿಂದ ಒಂದು ವರ್ಷದ ಅವಧಿಗೆ ಇರುತ್ತದೆ.
2. ಗುತ್ತಿಗೆದಾರರು, ಸೈಕಲ್/ಸ್ಕೂಟರ್ ಸ್ಟ್ಯಾಂಡ್‌ನ್ನು ಬೆಳಿಗ್ಗೆ 8-00 ಗಂಟೆಯಿಂದ ರಾತ್ರಿ 8-00 ಗಂಟೆಯವರೆಗೆ ಎಲ್ಲಾ ದಿನಗಳಲ್ಲೂ ನಡೆಸತಕ್ಕದ್ದು. ಆವರಣವನ್ನು ಗುತ್ತಿಗೆದಾರರು ಸ್ವಚ್ಛವಾಗಿ ಇಡತಕ್ಕದ್ದು.
3. ಸರ್ಕಾರಿ ನೌಕರರಿಂದ ಸೈಕಲ್ ಒಂದಕ್ಕೆ ತಿಂಗಳೊಂದಕ್ಕೆ ರೂ.2-00 ಹಾಗೂ ಮೋಟಾರ್ ಸೈಕಲ್, ಸ್ಕೂಟರ್, ಮೊಪೆಡ್ ಮತ್ತು ಕಾರುಗಳಿಗೆ ತಿಂಗಳೊಂದಕ್ಕೆ ರೂ.8-00 ರಂತೆ ಶುಲ್ಕವನ್ನು ಗುತ್ತಿಗೆದಾರರು ವಸೂಲಿ ಮಾಡುವುದು. ಇತರರಿಂದ ಸೈಕಲ್ ಒಂದಕ್ಕೆ ಒಂದು ದಿನಕ್ಕೆ 1-00 ರೂ.ನಂತೆ ಹಾಗೂ ಮೋಟಾರ್ ಸೈಕಲ್, ಸ್ಕೂಟರ್, ಮೊಪೆಡ್‌ಗಳಿಗೆ ದಿನವೊಂದಕ್ಕೆ ರೂ.2-00 ರಂತೆ ಮತ್ತು ಕಾರುಗಳಿಗೆ ರೂ.3-00 ರಂತೆ ಶುಲ್ಕವನ್ನು ವಸೂಲಿ ಮಾಡತಕ್ಕದ್ದು.
4. ಈ ನಿಲ್ದಾಣಗಳಲ್ಲಿ ನಿಲ್ಲಿಸಿರುವ ವಾಹನಗಳಿಗೆ ಗುತ್ತಿಗೆದಾರರು ಟೋಕನ್‌ಗಳನ್ನು ನೀಡತಕ್ಕದ್ದು.
5. ಈ ಮೇಲ್ಕಾಣಿಸಿರುವ ನಿಲ್ದಾಣಗಳಲ್ಲಿ ನಿಲ್ಲಿಸಿರುವ ವಾಹನಗಳಿಗೆ ಮೇಲ್ಕಾಣಿಸಿದಂತೆ ನಿಗದಿತ ಶುಲ್ಕವನ್ನು ಮಾತ್ರ ವಸೂಲಿ ಮಾಡತಕ್ಕದ್ದು.
6. ಸರ್ಕಾರಿ ಕಛೇರಿಗಳ ಸೈಕಲ್ ಃ ಸ್ಕೂಟರ್ ಚಾಲಕರುಗಳಿಂದ ಗುತ್ತಿಗೆದಾರರು ಶುಲ್ಕವನ್ನು ವಸೂಲಿ ಮಾಡಬಾರದು.
7. ಈ ನಿಲ್ದಾಣಗಳಲ್ಲಿ ನಿಲ್ಲಿಸಿರುವ ವಾಹನಗಳ ಭದ್ರತೆಯ ಜವಾಬ್ದಾರಿ ಗುತ್ತಿಗೆದಾರರದ್ದಾಗಿರುತ್ತದೆ. ಈ ಸ್ಟ್ಯಾಂಡಿನಲ್ಲಿ ವಾಹನಗಳನ್ನು ನಿಲ್ಲಿಸಿದ ಅವಧಿಯಲ್ಲಿ ವಾಹನಗಳಿಗೆ ಯಾವುದೇ ನಷ್ಟ ಅಥವಾ ಹಾನಿ ಉಂಟಾದಲ್ಲಿ ಗುತ್ತಿಗೆದಾರರು ಇದಕ್ಕೆ ಪರಿಹಾರವನ್ನು ನೀಡಲು ಜವಾಬ್ದಾರರಾಗಿರುತ್ತಾರೆ.
8. ಸೈಕಲ್, ಸ್ಕೂಟರ್, ಕಾರ್ ನಿಲ್ದಾಣದಲ್ಲಿ ನಿಲ್ಲಿಸಿರುವ ವಾಹನಗಳ ಭದ್ರತೆಯ ಪೂರ್ಣ ಜವಾಬ್ದಾರಿ ಗುತ್ತಿಗೆದಾರರದ್ದಾಗಿರುತ್ತದೆ.
9. ಈ ನಿಲ್ದಾಣದಲ್ಲಿ ನಿಲ್ಲಿಸಿರುವ ಯಾವುದೇ ವಾಹನವು ಕಾಣೆಯಾದಲ್ಲಿ ಅಥವಾ ಅದಕ್ಕೆ ಹಾನಿಯಾದಲ್ಲಿ ಇದು ಗುತ್ತಿಗೆದಾರರ ನಿರ್ಲಕ್ಷ್ಯತನ ಅಥವಾ ಉಪೇಕ್ಷೆಯಿಂದ ಆಗಿದ್ದಲ್ಲಿ, ಗುತ್ತಿಗೆದಾರರೇ ವಾಹನದ ಮಾಲೀಕರಿಗೆ ಪರಿಹಾರ ಕೊಡುವ ವಿಷಯದಲ್ಲಿ ಮುಖ್ಯ ಕಾರ್ಯದರ್ಶಿಗಳು ಕೊಡುವ ನಿರ್ಣಯವು ಅಂತಿಮವಾಗಿರುತ್ತದೆ. ಗುತ್ತಿಗೆ ಅವಧಿ ಮುಗಿದ ಮೇಲೆ ಗುತ್ತಿಗೆದಾರರಿಂದ ಸರ್ಕಾರಕ್ಕಾಗಲೀ ಅಥವಾ ವಾಹನದ ಮಾಲೀಕರಿಗಾಗಲೀ ಯಾವುದೇ ಬಾಕಿ ಇದ್ದಲ್ಲಿ ಅದನ್ನು ಮುಂಗಡ ಹಣದಿಂದ ಕಳೆದು ಬಾಕಿ ಹಣವನ್ನು ಗುತ್ತಿಗೆದಾರರಿಗೆ ಹಿಂತಿರುಗಿಸಲಾಗುವುದು.
10. ಗುತ್ತಿಗೆಯನ್ನು ಒಪ್ಪಿದ ದಿನಾಂಕದಿಂದ 15 ದಿವಸದೊಳಗೆ ಗುತ್ತಿಗೆದಾರರು ನಿಗದಿತ ಪ್ರಪತ್ರದಲ್ಲಿ ಕರಾರನ್ನು ಸಹಿ ಮಾಡಿ ಕೊಡತಕ್ಕದ್ದು.
11. ಗುತ್ತಿಗೆಯ ಷರತ್ತು ಮತ್ತು ನಿಬಂಧನೆಗಳ ಉಲ್ಲಂಘನೆಯಾದಲ್ಲಿ ಗುತ್ತಿಗೆಯನ್ನು ರದ್ದುಪಡಿಸಲಾಗುವುದು. ಅಂತಹ ಸಂದರ್ಭದಲ್ಲಿ ಭದ್ರತಾ ಠೇವಣಿಯಾಗಿ ಇಟ್ಟಿರುವ ಮುಂಗಡ ಹಣವನ್ನು ಹಾಗೂ ಮುಂಗಡವಾಗಿ ಪಾವತಿ ಮಾಡಿರುವ ಗುತ್ತಿಗೆ ಶುಲ್ಕವನ್ನು ಮುಟ್ಟುಗೋಲು ಹಾಕಲಾಗುವುದು.
12. ಗುತ್ತಿಗೆದಾರರು, ಗುತ್ತಿಗೆ ನಡೆಸುವ ಎಲ್ಲಾ ಸ್ಥಳಗಳಲ್ಲಿ ಸರ್ಕಾರಿ ಸಿಬ್ಬಂದಿ ಮತ್ತು ಸಾರ್ವಜನಿಕರಿಗೆ ನಿಗದಿಪಡಿಸಿರುವ ಶುಲ್ಕವನ್ನು ಬೋರ್ಡ್‌ನಲ್ಲಿ ಕಡ್ಡಾಯವಾಗಿ ಪ್ರದರ್ಶಿಸತಕ್ಕದ್ದು.

9) ಗುತ್ತಿಗೆಯ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ ಮಾತ್ರವಲ್ಲದೆ ಬೇರೆ ಯಾವುದೇ ಕಾರಣಗಳಿಗಾಗಿ ಯಾವುದೇ ಸಮಯದಲ್ಲಿ, ಗುತ್ತಿಗೆದಾರರಿಗೆ 2 ತಿಂಗಳ ಸೂಚನಾ ಪತ್ರ ನೀಡಿ ಗುತ್ತಿಗೆಯನ್ನು ರದ್ದುಪಡಿಸಲು ಸರ್ಕಾರಕ್ಕೆ ಹಕ್ಕಿರುತ್ತದೆ. ಈ ಉಪ ವಾಕ್ಯದಂತೆ ಗುತ್ತಿಗೆಯನ್ನು ರದ್ದುಪಡಿಸಿದಲ್ಲಿ ಉಳಿದ ಗುತ್ತಿಗೆ ಅವಧಿಗೆ ಸಮ ಪ್ರಮಾಣದ ಗುತ್ತಿಗೆ ಶುಲ್ಕವನ್ನು ಗುತ್ತಿಗೆದಾರರಿಗೆ ಮರಳಿ ಪಡೆಯುವ ಹಕ್ಕಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ರವಿಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1)

ಪಿ.ಆರ್. 363

**FORM - 1**

**(See Rule 9)**

**DEPARTMENT OF POLICE**

**Office of the Director General & Inspector General of Police, Karnataka State, Nrupathunga Road, Bangalore-1**

**NOTIFICATION Dated: 7th June 2005**

**Sri CHICKKASIDDIAH** Working as Armed Police Constable-160, D.A.R., Chamarajanagar District is permitted to Change his/her Name to **Sri. SHIVAKUMAR, S/O RANGASWAMY**

**S. RAMAKRISHNA**

Deputy Inspector General of Police, Head Quarters-1,

Signature & Designation of the Appointing Authority.

PD. 70